# ಸಿದ್ಧಗಂಗಾ ಹಳೆಯ ವಿದ್ಯಾರ್ಥಿ ಸಂಘದ "ಆಜೀವ ಸದಸ್ಯತ್ವದ" ಪಟ್ಟಿ.

ಸರ್ವಶ್ರೀ :—

319 ಜಿ. ಗಂಗಾಧರಯ್ಯ ಟ್ರಾಫಿಕ್ ಮ್ಯಾನೇಜರ್, ಕರ್ನಾಟಕ ಸಾರಿಗೆ ಸಂಸ್ಥೆ ಡಿಪ್ರೊ, ಕೋಲಾರ

320 ವಿ. ವೀರಪ್ಪಾಜಿ, ಉಪಾಧ್ಯಾಯರು. ಕಟ್ಟೇಬೇಗಲಿ ಹರವನಹಳ್ಳಿ, ಅಂಚೆ ಹೊಳೆನರಸೀಪುರ ತಾ||

321 ಆರ್. ಎಸ್. ಹುಚ್ಚಾಚಾರಿ. ಸಹಕಾರ ಸಂಘಗಳ ನೊಂದಣಿ ಅಧಿಕಾರಿ ಜಿ. ಪಿ. ನಗರ, ಬೆಂಗಳೂರು-75

322 ಎನ್. ನಾಗರಾಜು, ಮುಖ್ಯೋಪಾಧ್ಯಾಯರು. ಚಾಮುಂಡೇಶ್ವರಿ ಪ್ರೌಢಶಾಲೆ, ಸೀತಕಲ್ಲು ಮತ್ತು ಅಂಚೆ, ತುಮಕೂರು ತಾ||

323 ಎಂ. ಕೆ. ಕ್ಷೇತ್ರಪಾಲ, ಮುಖ್ಯಗುರುಗಳು, ಶಿವಕುಮಾರಸ್ವಾಮಿ ಸಂಸ್ಕೃತ ಪಾಠಶಾಲೆ, ಎಂ. ಎನ್. ಕೋಟೆ ಮತ್ತು ಅಂಚೆ, ಗುಬ್ಬಿ ತಾ||

324 ಡಾ|| ಎಸ್. ವೀರಸಂಗಯ್ಯ, ಆರೋಗ್ಯ ಅಧಿಕಾರಿ. ಕಡಬ ಮತ್ತು ಅಂಚೆ ಗುಬ್ಬಿ ತಾ||

325 ವಿದ್ವಾನ್ ಅಶ್ವತ್ಥಯ್ಯ. ಪ್ರಾಂಶುಪಾಲರು. ಆದಿಚುಂಚನಗಿರಿ ಸಂಸ್ಕೃತ ಕಾಲೇಜು, ಆದಿಚುಂಚನಗಿರಿಮಠ. ನಾಗಮಂಗಲ ತಾ||

326 ಎನ್ ಬಿ ಪರಮಶಿವಯ್ಯ, ಉಪಾಧ್ಯಾಯರು, ಸರ್ಕಾರಿ ಮಾಧ್ಯಮಿಕ ಶಾಲೆ, ಕ್ಯಾತಸಂದ್ರ ಮತ್ತು ಅಂಚೆ, ತುಮಕೂರು ತಾ||

327 ಬಿ. ಎ. ಉದಯಶಂಕರ, ಪ್ಲಾಂಟರ್' ಬೇಲೂರು, ಶುಕ್ರವಾರ ಸಂತೆ ಅಂಚೆ, ಸಕಲೇಶಪುರ ತಾ|

328 ಕೆ. ಸಿ. ಚಿಕ್ಕಣ್ಣ, ಉಪಾಧ್ಯಾಯರು. ಕೋಳಾಲಿ ಮತ್ತು ಅಂಚೆ ಕೊರಟಗೆರೆ ತಾ||

329 ಆರ್. ವಿ. ಈಶ್ವರಯ್ಯ, ಸಹನಿರ್ದೇಶಕರು ಕಾರ್ಯನಿರ್ವಾಹಕರ ಅಭಿಮಾನಿಗಳ ಕಾರ್ಯಾಲಯ ಕೆ. ಆರ್. ಸರ್ಕಲ್. ಬೆಂಗಳೂರು-1

330 ಆರ್. ವಿ, ವೀರಭದ್ರಯ್ಯ, ಪೋಸ್ಟ್‌ಮಾಸ್ಟರ್. ವೈ ಎನ್. ಹೊಸಕೋಟೆ, ಪಾವಗಡ ತಾ||

# ಸಿದ್ಧಗಂಗಾ

ಸಂಪುಟ-೨೪ ಸಂಚಿಕೆ-೧೨ ಡಿಸೆಂಬರ್, ೧೯೮೮

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧ

ಅಂಗದ ಮೇಲೆ ಲಿಂಗಧರಿಸಿದ ಮೇಲೆ
ಮಂಗ ಬುದ್ಧಿ ಗಳ ಬಿಡುಎಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಮಾಡುವ ಕಾಯಕ ಮನವಿಟ್ಟು ಮಾಡೆಂದೆ
ಮೃಡ ಶರಣರನುಡಿಯ ನೆನೆಯೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಸಂಪತ್ತಿನಿಂದಲ್ಲ ಸನ್ನದಿನಿಂದಲ್ಲ
ವಿದ್ಯೆಯಿಂದಲ್ಲ ಗುಣದಿಂದೆ । ಶರಣತ್ವವೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್. ವಿ. ವೀರಭದ್ರಯ್ಯ

# ಈ ಸಂಚಿಕೆಯಲ್ಲಿ

# ಶ್ರೀವಾಣಿ



ವ್ಯಕ್ತಿ ದಿನ ನಿತ್ಯ ಒಂದಲ್ಲ ಒಂದು ರೂಪದಲ್ಲಿ ದುಡಿದು ಹಣ ಸಂಪಾದನೆ ಮಾಡುತ್ತಾನೆ ಹಣದಿಂದ ತನ್ನ ಮತ್ತು ತನ್ನ ಕುಟುಂಬದ ಜೀವನ ನಿರ್ವಹಣೆಮಾಡಿಕೊಳ್ಳುತ್ತಾನೆ ಅಲ್ಪ ಸ್ವಲ್ಪ ಉಳಿಸಿ ಮನೆ,ಮಠ,ಆಸ್ತಿ ನಿಧಿ ರೂಪದಲ್ಲಿ ಕೂಡಿಸುತ್ತಾನೆ. ಪ್ರಾಮಾಣಿಕವಾಗಿ ದುಡಿದು ಮಾಡಿದ ಆಸ್ತಿ ಮತ್ತು ಹಣ ವ್ಯರ್ಥವ್ಯಯವಾಗದೆ ಉದ್ದೇಶಿತ ಫಲ ಕೊಡಬೇಕೆಂಬುದು ಅವನ ಆಸೆ. ನನ್ನನಂತರವೂ ಹಿಂದಿನಂತೆಯೇ ಉಪಯೋಗವಾಗಬೇಕೆಂಬುದೂ ಆ ಪ್ರಾಮಾಣಿಕನ ಹಂಬಲ. ದೂರದೃಷ್ಟಿಯುಳ್ಳವನಾಗಿ ತನ್ನ ಸಂಕಲ್ಪ, ಆಸೆ, ಆಕಾಂಕ್ಷೆಗಳನ್ನು ಈಡೇರಿಸಬಲ್ಲ ಯೋಗ್ಯ ವ್ಯಕ್ತಿಗೆ ಎಲ್ಲ ಜವಾಬ್ದಾರಿಯನ್ನು ವಹಿಸಿಕೊಡುತ್ತಾನೆ. ವ್ಯಕ್ತಿಯ ಆಯ್ಕೆ ಸೂಕ್ಷ್ಮವಾದುದು ಒಂದು ಕಥೆ ನೆನಪಿಗೆ ಬರುತ್ತದೆ, ಒಬ್ಬ ಸದ್ಗೃಹಸ್ಥನಿದ್ದ. ಆತನಿಗೆ ಮೂರು ಮಂದಿ ಮಕ್ಕಳಿದ್ದರು. ಅವನು ಪ್ರಾಮಾಣಿಕವಾಗಿ ದುಡಿದು ಬಹಳಷ್ಟು . ಆಸ್ತಿ ಹಣ ಸಂಪಾದನೆ ಮಾಡಿದ್ದ. ಮಕ್ಕಳು ಪ್ರಾಯಕ್ಕೆ ಬರುವವರೆಗೂ ಜವಾಬ್ದಾರಿಯಿಂದ ಸಂಸಾರ ನಿರ್ವಹಣೆ ಮಾಡಿ ಗಳಿಸಿದ ಆಸ್ತಿಯನ್ನು ರಕ್ಷಣೆ ಮಾಡಿಕೊಂಡು ಬಂದಿದ್ದ. ತನಗೆ ಮುಪ್ಪಿನ ಕಾಲ ಪ್ರಾಪ್ತವಾದ್ದರಿಂದ ಗಳಿಸಿದ ಆಸ್ತಿ ಮತ್ತು ಹಣದ ರಕ್ಷಣೆಯ ಬಗ್ಗೆ ಚಿಂತೆಗೊಳಗಾಗಿ ಮೂರು ಮಂದಿ ಮಕ್ಕಳನ್ನು ಕರೆದು ಹೇಳಿದ. ನಾನು ಕೊಡುವ ಈ ಒಂದು ರೂಪಾಯಿಂದ ನನ್ನ ಕೋಣೆಯನ್ನು ತುಂಬಬೇಕು. ತುಂಬಿದವರಿಗೆ ನನ್ನ ಆಸ್ತಿಯನ್ನು ಕೊಡುತ್ತೇನೆಂದು ಪರೀಕ್ಷಿಸತೊಡಗಿದ. ಹಿರಿಯವನು ಬೇಗ ಹೋಗಿ ದಾರಿಯಲ್ಲಿ ಒಂದು ರೂಗೆ ಹೆಚ್ಚು ಸಿಗುವ ಧಾನ್ಯವನು ತಂದು ಕೋಣೆಯ ತುಂಬ ಹರಡಿದ. ನೆಲ ಮಾತ್ರ ಮುಚ್ಚಿದ ಗೋಡೆ ಮೇಲ್ಭಾಗವನ್ನು ಮುಚ್ಚಿದಂತಾಗಲಿಲ್ಲ ಎಂದ ತಂದೆ. ಎರಡನೆಯವನು ದಾರಿಯಲ್ಲಿ ಹೋಗುವಾಗ ಹುಲ್ಲು ಹೊರೆ ನೋಡಿ ತಂದು ರೂಮಿನಲ್ಲಿ ತುಂಬಿದ. ನೆಲಗೋಡೆ ಮುಚ್ಚಿದವು, ಮೇಲ್ಭಾಗ ಮುಚ್ಚಿಲ್ಲ. ಎಂದ ಮೂರನೆಯವನು ದಾರಿಯಲ್ಲಿ ಹೋಗುವಾಗ ಹಸಿವಿನಿಂದ ಕಂಗೆಟ್ಟ ಭಿಕ್ಷುಕನನ್ನು ನೋಡಿ ಅವನಿಗೆ ನಾಲ್ಕು ಆಣೆ ಕೊಟ್ಟ, ಸ್ವಲ್ಪ ಮುಂದೆ ಹೋದ ನಡೆಯಲಾರದ ಹಸಿವಿನಿಂದ ಕೂಡಿದ ಎಳವನಿಗೆ ನಾಲ್ಕು ಆಣೆ ಕೊಟ್ಟ ಅಂಗಡಿಗೆ ಹೋಗಿ ಎರಡು ಮೇಣದ ಬತ್ತಿಯನ್ನು, ಕೋಣೆಯಲ್ಲಿ ಹಚ್ಚಿ ಕೈಗೊಂದು ಮೇಲೊಂದು ಹಿಡಿದ. ಕೆಳಗೂ ಬೆಳಕು, ಗೋಡೆಯಲ್ಲಾ ಬೆಳಕು, ಮೇಲೆಲ್ಲಾ ಬೆಳಕು ತುಂಬಿದೆ ಎಂದ. ಬೆಳಕಿಲ್ಲದ ಸ್ಥಳವಿಲ್ಲ ಎಂದು ಹೇಳಿ ಉಳಿದ ನಾಲ್ಕು ಆಣೆ ತಂದೆಗೆ ಕೊಟ್ಟ. ತಂದೆಗೆ ಸಂತೋಷವಾಯಿತು ಕಿರಿಯ ಮಗನ ತ್ಯಾಗ ಬುದ್ಧಿವಂತಿಕೆ ವಿವೇಕ ಉಳಿತಾಯಗಳನ್ನು ಮೆಚ್ಚಿ ಅವನಿಗೆ ಆಸ್ತಿಯನ್ನು ಕೊಟ್ಟ. ತನ್ನ ಆಯ್ಕೆ ಯೋಗ್ಯವಾಗಿದೆ. ತನ್ನ ಆಸೆ ಆಕಾಂಕ್ಷೆಗಳನು ಈಡೇರಿಸುವನೆಂಬ ನಂಬಿಕೆ ಇದೆ.- ವ್ಯಕ್ತಿ ವಿವೇಕಿಯಾದಾಗ ಎಲ್ಲವೂ ಕೈಗೂಡುವುದರಲ್ಲಿ ಸಂಶಯವಿಲ್ಲ.

## ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ


ಪ್ರಧಾನ ಸಂಪಾದಕರು
**ಪ|| ಚನ್ನಪ್ಪ ಎರೇಸೀಮೆ**

* * *

ಸಂಪಾದಕರು
**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು
**ಬಿ. ವೀರಭದ್ರಯ್ಯ**
**ಪಿ. ಎನ್. ಚಂದ್ರಶೇಖರಯ್ಯ**

* * *

ಜಾಹೀರಾತು ವಿಭಾಗ
**ಎಂ. ರೇಣುಕಾರಾಧ್ಯ**

* * *

ಪ್ರಸಾರ ವಿಭಾಗ
**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು
**ಹೆಚ್. ಬಿ. ಗಂಗಾಧರಯ್ಯ**
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
**ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ
**ಶ್ರೀ ಸಿದ್ಧಗಂಗಾ ಕ್ಷೇತ್ರ**


### ಚಂದಾ ವಿವರ

ವಾರ್ಷಿಕ ಚಂದಾ 20 - 00 ರೂ
ಅಜೀವ ಸದಸ್ಯತ್ವ 201 - 00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ; ದರ್ಶನ, ಇತಿಹಾಸ ವೈಚಾರಿಕ ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

**" ಸಂಪಾದಕರು "**

**'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

## ಶ್ರೀ ಮಠದ ಹಳೆಯ ವಿದ್ಯಾರ್ಥಿಗಳು.

ಶ್ರೀ ಮಠದ ಕಾಯಕ–ದಾಸೋಹ ಕಮ್ಮಟದಲ್ಲಿ ಮೂಡಿ ಬಂದ ನಾಣ್ಯಗಳು "ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು" ಎನ್ನುವಂತೆ ರೂಪ ಪಡೆದವರು. 1917 ರಿಂದ ಶ್ರೀ ಮಠ ರೂಪಿಸಿದ ನಾಣ್ಯಗಳಿಗೆ ಲೆಕ್ಕಸಿಕ್ಕದು. ಕೃತಜ್ಞತೆಯ ಸಂಕೇತವಾಗಿ ರಾಷ್ಟ್ರದ ವಿವಿಧ ಮೂಲೆಗಳಲ್ಲಿ ಅರಳಿ , ಕಂಪನ್ನು ಗಂಧಗಾಳಿಯನ್ನು ಸೂಸಿದ್ದರೆ ಬೆಳೆದುನಿಂತ ಒಬ್ಬೊಬ್ಬರೂ ಇಂದು ನಮ್ರ ಭಾವದಿಂದ ಶ್ರೀ ಸಂಸ್ಥೆಯನ್ನು ಸ್ಮರಿಸುತ್ತಿದ್ದಾರೆ. ತಮ್ಮ ಜೀವಿತದ ಅತ್ಯಂತ ಪವಿತ್ರ ಕಾಲವನ್ನು ಕಳೆದ ಆ ದಿನದ ಸವಿನೆನಪುಗಳನ್ನು ನೇಸಪಿನಂಗಳದಲ್ಲಿ ತಂದು ಕೊಂಡು ಆನಂದಿಸುತ್ತಿದ್ದಾರೆ. ಕೈ ಹಿಡಿದು ನಡೆಸಿದ ಶ್ರೀ ಗುರುವನ್ನು ಭಕ್ತಿ ಶ್ರದ್ಧೆಗಳಿಂದ ಸ್ಮರಿಸುತ್ತ ದೀಪ ಹಚ್ಚುತ್ತಿದ್ದಾರೆ. 'ಈಳೆ ನಿಂಬೆ ಮಾವು ಮಾದಳಗಳಿಗೆ ಶ್ರೀ ಮಠದಲ್ಲಿ ಹುಳಿ ನೀರನೆರೆದವರಾರಯ್ಯ' ಎನ್ನುತ್ತಾಳೆ ಅಕ್ಕಮಹಾದೇವಿ ಶ್ರೀ ಮಠದಲ್ಲಿ ನಾಲ್ಕುದಿನ ಇದ್ದು ವಿದ್ಯಾವಂತರಾದ ಹಳೆಯ ವಿದ್ಯಾರ್ಥಿಗಳನ್ನೆಲ್ಲ ರೂಪಿಸಿದವರಾರು? ಚಿಂತನೆ ನಡೆಸಿದ್ದಾರೆ ಒಬ್ಬೊಬ್ಬರೂ ಒಂದೊಂದು ರಂಗದಲ್ಲಿ ಮಿಂಚಿದ್ದಾರೆ ಜೀವನದ ಹತ್ತಾರು ಕ್ಷೇತ್ರಗಳಲ್ಲಿ ಹೆಸರು ಮಾಡಿದ್ದಾರೆ. ಸಭ್ಯತೆಗೆ, ಸಜ್ಜನಿಕೆಗೆ, ಸಂಭಾವಿತನಕ್ಕೆ, ಸೇವಾ ಮನೋಧರ್ಮಕ್ಕೆ, ಲೌಕಿಕಕ್ಕೆ, ಪಾರಮಾರ್ಥಕ್ಕೆ ಹೆಸರಾಗಿದ್ದಾರೆ. ಪ್ರಶಸ್ತಿ, ಪ್ರಭಾವಗಳನ್ನು ಗಳಿಸಿದ್ದಾರೆ. ದೇಶ, ವಿದೇಶಗಳನ್ನು ಕಂಡು ಬಂದಿದ್ದಾರೆ. ನಾಲ್ಕಾರು ಮಂದಿ ಇದಕ್ಕೆ ಅಪವಾದವಾಗಿ ಜೀವಿಸಿರಬಹುದು ; ಅದು ದೊಡ್ಡದಲ್ಲ. ತಾವು ಓದಿದ ಸಂಸ್ಥೆಯ ಬಗೆಗೆ ಅಭಿಮಾನದಿಂದ್ದಾರೆ. ತಮ್ಮನ್ನು ಕರುಣಾಳು ಬೆಳಕಾಗಿ ಬಂದು ಮುಸುಕಿಗೀ ಮಬ್ಬಿನಲಿ ಕೈ ಹಿಡಿದು ನಡೆಸಿದ" ಪಾವನ ಮೂರ್ತಿಯನ್ನು ತ್ರಿಕರಣ ಶುದ್ಧಿಯಿಂದ ಆರಾಧಿಸುತ್ತಿದ್ದಾರೆ. ತಮಗೆ ಅನ್ನವಿಟ್ಟು ಸಲಹಿದ, ಬಟ್ಟೆಕೊಟ್ಟು ಪೋಷಿಸಿದ, ಜೀವನೋಪಾಯ ಕಲ್ಪಿಸಿಕೊಟ್ಟು ಉಪಕರಿಸಿದ ಶ್ರೀ ಮಠದ ಋಣವನ್ನು ತೀರಿಸುವುದೆಂತು ಎಂದು ಚಿಂತನ-ಮಂಥನ ಮಾಡುತ್ತ ಬಂದಿದ್ದಾರೆ. ವರ್ಷಕ್ಕೊಮ್ಮೆಯಾದರೂ ಶ್ರೀ ಮಠಕ್ಕೆ ಬಂದು ತಮ್ಮ ಪ್ರೀತಿ ಗೌರವಗಳನ್ನು ವ್ಯಕ್ತಪಡಿಸುತ್ತಿದ್ದಾರೆ. ಯಥಾಶಕ್ತಿ "ಅಳಿಲು ಸೇವೆ ಮಳಲ ಭಕ್ತಿ" ಯನ್ನರ್ಪಿಸುತ್ತಿದ್ದಾರೆ. ಶ್ರೀ ಮಠದ ಸೇವೆಗೆ ಕಾಣಿಕೆಯನ್ನು ನೀಡುತ್ತ ಬಂದವರಿದ್ದಾರೆ ಅವಕಾಶಲಭ್ಯವಾದಾಗಲೆಲ್ಲ ಶ್ರೀ ಮಠಕ್ಕೆ ಬಂದು ತಮ್ಮಿಂದಾದ ಶ್ರಮದಾನವನ್ನು ಮಾಡುವರಿದ್ದಾರೆ. ಶ್ರೀ ಮಠಕ್ಕೆ ಸಂಬಂಧಿಸಿದ ಆಸ್ತಿ–ಪಾಸ್ತಿಗಳ ಉಸ್ತುವಾರಿ, ಉತ್ಪತ್ತಿಗಳನ್ನು ಪ್ರಾಮಾಣಿಕವಾಗಿ ರಕ್ಷಿಸಿಕೊಂಡು ಬರುವವರಿದ್ದಾರೆ. ತಮ್ಮ ಗುರುಗಳು ತಮಗೆ ತೋರಿಸಿದ ದಾರಿಯಲ್ಲಿ

ಅಪಮಾರ್ಗಕ್ಕೆ ಬೀಳದಂತೆ ನಡೆದುಕೊಂಡ್ಡು ಬರುತ್ತಿದ್ದಾರೆ. ಶ್ರೀ ಮಠದ ಅಮೂಲ್ಯ ಆಸ್ತಿ ಹಳೆಯ ವಿದ್ಯಾರ್ಥಿಗಳು ಎಂಬ ಪ್ರಶಂಸೆಗೆ ಪಾತ್ರರಾಗಿದ್ದಾರೆ.

ಹಳೆಯ ವಿದ್ಯಾರ್ಥಿಗಳೆಲ್ಲ ಶ್ರೀ ಗುರುಗಳ ದಿವ್ಯ ಮಾರ್ಗದರ್ಶನದಲ್ಲಿ ಸಂಘವೊಂದನ್ನು ಸ್ಥಾಪಿಸಿಕೊಂಡು ಆದರ್ಶನೀಯ ಸೇವೆಯನ್ನು ಮಾಡುತ್ತ ನಡೆದಿರುವುದೊಂದು ಹೆಮ್ಮೆಯ ಸಂಗತಿ. ಜಾತ್ರಾ ಕಾಲದಲ್ಲಿ ನಡೆಯುವ ವ್ಯವಸಾಯ ಮತ್ತು ಕೈಗಾರಿಕೆ ವಸ್ತು ಪ್ರದರ್ಶನ, ಸಿದ್ಧಗಂಗಾ ಮಾಸ ಪತ್ರಿಕೆಯ ಪ್ರಕಟಣೆ, ಗ್ರಾಮಾಂತರ ಬಸವ ಜಯಂತಿಯ ಸಮಾರಂಭಗಳು ಉದ್ದಾನ ಶಿವಯೋಗಿಗಳ ಪುಣ್ಯಾರಾಧನೆ, ಇತ್ಯಾದಿಯಾಗಿ ಅವಿಭಾಜ್ಯವಾಗಿ ಬೆಸೆದುಕೊಂಡಿದ್ದಾರೆ, ಶ್ರೀ ಮಠದ ಆಗು-ಹೋಗುಗಳಲ್ಲಿ ಸ್ಪಂದಿಸುತ್ತ ಬಂದಿದ್ದಾರೆ. ಪರಮ ಪೂಜ್ಯ ಶ್ರೀ ಶ್ರೀಗಳು ಕಟ್ಟಿದ ಶಿಕ್ಷಣ ಸಂಸ್ಥೆಗಳು ಇನ್ನೂ ಅಭಿವೃದ್ಧಿಯನ್ನು ಸಾಧಿಸಬೇಕು. ಅದಕ್ಕಾಗಿ ತಾವು ಮಾಡಬೇಕಾದುದೇನು ಎಂದೆಲ್ಲ ಚರ್ಚಿಸುತ್ತಿದ್ದಾರೆ. ಶ್ರೀ ಮಠದ ಪರಂಪರೆಯನ್ನು ಸದಾ ಗೌರವಿಸುತ್ತ ಬಂದಿದ್ದಾರೆ. ಆ ಪರಂಪರೆ ಬಸವಾದಿ ಶರಣರು ಆಚರಿಸಿ ತೋರಿಸಿದ ಕಾಯಕ ದಾಸೋಹವೆಂಬುದನ್ನು ಮನಗಂಡವರಾಗಿದ್ದಾರೆ. ವಿಭಿನ್ನ ಸ್ವಭಾವದ, ವಿವಿಧ ಅಭಿರುಚಿಯ, ನೂರಾರು ಮನೋಧರ್ಮದ ವಿದ್ಯಾರ್ಥಿಗಳಿದ್ದರೂ ಅವರೆಲ್ಲರಲ್ಲಿ ಇಂದು ಹರಿಯುತ್ತಿರುವುದು ಒಂದು ಸಮಾನ ಧರ್ಮದ ಗುಣ. ಅದೆಂದರೆ ನಾವೆಲ್ಲ ಶ್ರೀ ಮಠದ ಹಳೆಯ ವಿದ್ಯಾರ್ಥಿಗಳೆಂಬ ಅಭಿಮಾನ ಶ್ರೀ ಗುರುಕೃಪೆಗೆ ಸಂದವರೆಂಬ ಕೃತಜ್ಞತಾ ಭಾವನೆ. ಇದಕ್ಕಿಂತ ದೊಡ್ಡದೇನಿದೆ ? ಶ್ರೀ ಮಠ ಅಖಂಡ ಜೀವನದುದ್ದಕ್ಕೂ ಮಾಡುತ್ತ ಬಂದಿರುವ ಲಕ್ಷದೀಪೋತ್ಸವ ಇದು. ಜಂಗಮ ಜಗತ್ತಿನ ಮಂಗಳ ದೀಪಗಳು ಹಳೆಯ ವಿದ್ಯಾರ್ಥಿಗಳು, ಅವು ಜ್ಯೋತಿ ಮುಟ್ಟಿದ ಬತ್ತಿಗಳು.

---

## ಅಭಿನಂದನೆ

ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ, ಶ್ರೀ ಸಿದ್ಧಲಿಂಗೇಶ್ವರ ವೇದ ಮತ್ತು ಸಂಸ್ಕೃತ ಕಾಲೇಜಿನ ಪ್ರಾಂಶುಪಾಲರೂ ಆದ ಶ್ರೀ ಎಸ್ ಪಿ. ಶಿವಶಂಕರ್ ರವರಿಗೆ ಕರ್ನಾಟಕ ಸರ್ಕಾರ ಸಂಸ್ಕೃತ ವಿದ್ವಾಂಸರೆಂದು ಪರಿಗಣಿಸಿ ರಾಜ್ಯ ಪ್ರಶಸ್ತಿ ನೀಡಿದ ಸಂದರ್ಭದಲ್ಲಿ 'ಸಿದ್ಧಗಂಗಾ' ಸಂತೋಷವನ್ನು ವ್ಯಕ್ತಪಡಿಸುತ್ತ ತುಂಬು ಹೃದಯದ ಅಭಿನಂದನೆಗಳನ್ನು ಸಲ್ಲಿಸುತ್ತದೆ.

* * * * * *

ಶ್ರೀಮಠದ ಸನಿವಾಸ ಶೈಕ್ಷಣಿಕ ಸಂಸ್ಥೆಗಳಲ್ಲೊಂದಾದ ಶ್ರೀ ಸಿದ್ಧಲಿಂಗೇಶ್ವರ ಪ್ರೌಢಶಾಲೆಗೆ ಕೇಂದ್ರಸರ್ಕಾರ, ಸಂಸ್ಥೆಯು ಕ್ರೀಡಾ ಚಟುವಟಿಕೆಗಳನ್ನು ಪರಿಗಣಿಸಿ ಹತ್ತು ಸಹಸ್ರರೂಪಾಯಿಗಳ ಪ್ರಶಸ್ತಿಯನ್ನು ನೀಡಿದ ಸಂದರ್ಭದಲ್ಲಿ 'ಸಿದ್ಧಗಂಗಾ' ಸಂತೋಷಿಸುತ್ತ ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಸಿದ್ಧಗಂಗಾ

ಆರೋಗ್ಯ ರಹಸ್ಯ-೮

## ಹೊಗೆಸೊಪ್ಪು

ಮಹಾತ್ಮ ಗಾಂಧಿ

ಹೊಗೆಸೊಪ್ಪು ಮನುಷ್ಯ ಜಾತಿಯ ಸರ್ವನಾಶಮಾಡಿದೆ. ಅದರ ಸುಳಿಗೆ ಒಮ್ಮೆ ಸಿಕ್ಕರೆ ಬಿಡಿಸಿಕೊಂಡು ಹೊರಗೆ ಬರುವುದೇ ಕಷ್ಟ. ಹೊಗೆಸೊಪ್ಪಿನ ಬಳಕೆ ಲೋಕದಲ್ಲಿ ಎಲ್ಲಾ ಕಡೆಯಲ್ಲಿಯೂ ಒಂದಲ್ಲ ಒಂದು ರೂಪದಲ್ಲಿ ಇದ್ದೇ ಇದೆ. ಮಾದಕಗಳಲ್ಲಿ ಅತ್ಯಂತ ಮಾದಕ ಎಂದಿದ್ದಾರೆ ಟಾಲ್‌ಸ್ಟಾಯ್ ಹೊಗೆಸೊಪ್ಪನ್ನು. ಆ ಮಹಾಪುರುಷನ ಈ ತೀರ್ಪು ನಮ್ಮ ಗಮನ-ಗೌರವಗಳಿಗೆ ಪಾತ್ರವಾಗಬೇಕು. ಚಿಕ್ಕಂದಿನಲ್ಲಿ ಟಾಲ್‌ಸ್ಟಾಯ್ ಹೊಗೆಸೊಪ್ಪು, ಮದ್ಯಗಳನ್ನು ಧಾರಾಳವಾಗಿಯೇ ಸೇವಿಸುತ್ತಿದ್ದರು. ಎರಡರ ಕೆಟ್ಟ ಪರಿಣಾಮವೂ ಅವರಿಗೆಗೊತ್ತು. ಇಷ್ಟಾದರೂ ಮದ್ಯ, ಅಫೀಮುಗಳ ಬಗ್ಗೆ ಅಧಿಕಾರಯುತವಾಗಿ ಹೇಳಿದಂತೆ ನಾನು ಹೊಗೆಸೊಪ್ಪಿನ ವಿಷಯದಲ್ಲಿ ಹೇಳಲಾರೆ. ಆದರೆ ಹೊಗೆಸೊಪ್ಪಿನಿಂದ ಕಿಂಚಿತ್ತೂ ಲಾಭವಿಲ್ಲವೆಂಬುದನ್ನು ನಾನು ಖಂಡಿತ ಹೇಳಬಲ್ಲೆ. ಬತ್ತಿ ಸೇದುವುದು ಬರೀ ಮುಂದುಗಾರಿಕೆ. ಒಬ್ಬ ಇಂಗ್ಲೀಷರವನು ತಿಂಗಳಿಗೆ ೭೫ ರೂಪಾಯಿ ಹೊಗೆಸೊಪ್ಪಿಗಾಗಿ ವೆಚ್ಚಮಾಡುತ್ತಿದ್ದ. ಅವನಿಗೆ ತಿಂಗಳಿಗೆ ೩೭೫ ರೂ ವರಮಾನ. ತಿಂಗಳ ವರಮಾನದಲ್ಲಿ ಐದರಲ್ಲೊಂದು ಪಾಲನ್ನೆ ಅವನು ಸೇದಿಬಿಡುತ್ತಿದ್ದ.

ಸಿಗರೇಟು ಬೀಡಿ ಸೇದುವವರು ಪರರ ಭಾವನೆಗಳಿಗೆ ಕಲ್ಲಾಗುತ್ತಾರೆ. ಸಿಗರೇಟು ಸೇದದವರಿಗೆ ಇದರ ಹೊಗೆ ಅಸಹನೀಯವಾಗಿರುತ್ತದೆ. ಆದರೂ ಪಕ್ಕದಲ್ಲಿರುವವರ ಭಾವನೆ ಹೇಗೇ ಇರಲಿ ಅದನ್ನು ಗಮನಿಸದೆ ತಮ್ಮ ಪಾಡಿಗೆ ತಾವು ಸಿಗರೇಟು ಸೇದುವವರೇ ಹೆಚ್ಚು. ರೈಲಿನಲ್ಲಿ ಬಸ್ಸಿನಲ್ಲಿ ಇದು ಅನುಭವವಾಗುತ್ತದೆ.

ಹೊಗೆಸೊಪ್ಪು ಸೇದುವವರ ಬಾಯಿಂದ ಸದಾ ದುರ್ಗಂಧ ಹೊರಡುತ್ತಿರುತ್ತದೆ. ಬಹುಶಃ ಹೊಗೆಸೊಪ್ಪು ಸೂಕ್ಷ್ಮ ಸುಕುಮಾರ ಭಾವನೆಗಳನ್ನು ಸಾಯಿಸುತ್ತದೆಯೇನೋ. ಅದಕ್ಕಾಗಿಯೇ ಜನರು ಹೊಗೆಸೊಪ್ಪು ಸೇದುತ್ತಾರೇನೋ. ಟಾಲ್‌ಸ್ಟಾಯಿಯ ಕತೆಗಳಲ್ಲಿ ಒಂದು ಪಾತಯಭ್ರುಂಕರ ಕೃತ್ಯವೊಂದನ್ನು ಮಾಡಬೇಕಾಗಿತ್ತು. ಅವನು ಮೊದಲು ಹೆಂಡ ಕುಡಿಯುವಂತೆ ಮಾಡುತ್ತಾನೆ ಟಾಲ್‌ಸ್ಟಾಯ್, ಯಾರನ್ನೋ ಅವನು ಕೊಲ್ಲಬೇಕಾಗಿತ್ತು. ಕುಡಿದು ಅಮಲೇರಿದರೂ ಅವನು ಆ ಕೆಲಸಮಾಡಲು ಹಿಂಜರಿದ. ಏನೋ ಯೋಚಿಸುತ್ತ ಒಂದು ಸಿಗರೇಟು ಹಚ್ಚಿದ,

ಆ ಹೊಗೆ ಸುರುಳಿಯಾಗಿ ಏರುತ್ತಿದ್ದುದನ್ನು ನೋಡಿ 'ಎಂಥ ಹೇಡಿ ನಾನು! ಈ
ಕೊಲೆ ಮಾಡುವುದು ನನ್ನ ಕರ್ತವ್ಯ, ನನಗೆ ಮೀನ ಮೇಷವೇಕೆ? ಏಳು,
ಎದ್ದೇಳು, ನಿನ್ನ ಕೆಲಸಮಾಡು' ಎಂದುಕೊಂಡ, ಡೋಲಾಯ ಮಾನವಾಗಿದ್ದ
ಅವನ ಮನಸ್ಸು ಹಾಗೆ ನಿರ್ಧಾರವಾಯಿತು. ಈ ವಾದ ಅಷ್ಟು ಮೊನಚಾಗಿಲ್ಲ.
ಸಿಗರೇಟು ಸೇದುವವರೆಲ್ಲರೂ ಕೆಟ್ಟವರಲ್ಲ. ಸಿಗರೇಟು ಸೇದುವ ಕೋಟ್ಯಂತರ ಜನ
ಸಾಮಾನ್ಯಜೀವನವನ್ನು ಸರಾಗವಾಗಿ ನಡಸುತ್ತಿದ್ದಾರೆ. ಆದರೂ ಮೇಲಿನ ಪ್ರಸಂಗ
ವನ್ನು ವಿಚಾರವಂತರು ಗಮನಿಸಬೇಕು ಸಿಗರೇಟು ಸೇದುವವನು ಚಿಕ್ಕಪುಟ್ಟ
ಅಪರಾಧಗಳನ್ನು ಮಾಡುತ್ತ ಹೋಗುತ್ತಾನೆ, ಯಾರೂ ಗಮನಿಸದಂತೆ, ಎಂದು
ಟಾಲ್‌ಸ್ಟಾಯ್ ಅಭಿಪ್ರಾಯವಿರಬಹುದು.

ಹಿಂದುಸ್ಥಾನದಲ್ಲಿ ಜನರು ಹೊಗೆಸೊಪ್ಪನ್ನು ಬೀಡಿ ಸಿಗರೇಟಿಗೆ, ನಶ್ಯಕ್ಕೆ,
ಎಲೆಯಡಿಕೆಗೆ ಬಳಸುತ್ತಾರೆ. ನಶ್ಯದಿಂದ ಹಿತವಾಗುತ್ತದೆಂದು ಕೆಲವರು ತಿಳಿದಿದ್ದಾರೆ
ಕೆಲವರು ವೈದ್ಯರು ಹಕೀಮರು ಆ ಸಲಹೆ ಕೊಡುತ್ತಾರೆ. ಇದು ಅನಗತ್ಯವೆಂದ
ನಾನು ತಿಳಿದಿದ್ದೇನೆ. ಆರೋಗ್ಯವಂತನಿಗೆ ಇವು ಯಾವುದೂ ಬೇಡ.

ಈ ಮೂರರಲ್ಲಿ ಹೊಗೆಸೊಪ್ಪನ್ನು ಅಗಿಯುವುದು ಬಹಳ ಅನಿಷ್ಟ, ಬಹ
ಕೊಳಕು. ಅದರ ಲಾಭ ಬರೀ ಕಲ್ಪನೆ. ಗುಜರಾತಿಯಲ್ಲಿ ಒಂದು ಗಾದೆಯಿದೆ
'ಬೀಡಿ ಮನೆಯೆಲ್ಲಾ ಹೊಗೆ ಮಾಡುತ್ತದೆ, ನಶ್ಯ ಬಟ್ಟೆಗಳನ್ನು ಹಾಳು ಮಾಡುತ್ತದೆ
ಕಡ್ಡಿಪುಡಿ ಮನೆಯನ್ನೆಲ್ಲಾ ಕೊಳಕು ಮಾಡುತ್ತವೆ,'

ಜಾಣರಾದವರು ಹೊಗೆಸೊಪ್ಪಿನ ರಸವನ್ನು ಉಗುಳಲು ಒಂದು ಉಗುಳ
ಪಾತ್ರೆಯನ್ನು ಬಳಸುತ್ತಾರೆ. ಆದರೆ ಹೆಚ್ಚು ಜನರು ನೆಲದಮೇಲೆ, ಗೋಡೆಗ
ಮೇಲೆ ಉಗುಳುತ್ತಾರೆ ಸ್ವಲ್ಪವೂ ಸಂಕೋಚವಿಲ್ಲದೆ. ಬೀಡಿ ಸೇದುವವನು ಮ
ತುಂಬಾ ಹೊಗೆ ಮಾಡುತ್ತಾನೆ, ಮನೆಗೆ ಬೆಂಕಿ ಹತ್ತುವ ಸಂಭವವೂ ಉಂಟು
ನಶ್ಯ ಹಾಕುವವನ ಬಟ್ಟೆ ಹಾಳಾಗುತ್ತವೆ. ಕರವಸ್ತ್ರಗಳನ್ನಿಟ್ಟುಕೊಂಡು ಬ
ಕೊಳೆಯಾಗದಂತೆ ಮಾಡಿಕೊಳ್ಳುವವರು ಕೆಲವರಿದ್ದಾರೆ. ಆರೋಗ್ಯವನ್ನು ಬಯಸ
ವವರು ಈ ಕೆಟ್ಟ ಚಟಗಳ ದಾಸರಾದರೆ ಸಂಕಲ್ಪಪೂರ್ವಕ ಅವನ್ನು ಬಿಡಬೇಕ
ಕೆಲವರಿಗೆ ಒಂದು, ಕೆಲವರಿಗೆ ಮೂರು ಚಟ ಉಂಟು. ಅವರಿಗೆ ಆ ಚಟ ಅಸಹ
ವೆನಿಸುವುದೇ ಇಲ್ಲ. ನಿಧಾನವಾಗಿ ಯೋಚಿಸಿದರೆ ಮೂಗಿನಿಂದ ಹೊಗೆ ಬಿಡುವುದರ
ಹಗಲೆಲ್ಲಾ ಬಾಯೊಳಗೆ ಎಲೆ ಹೊಗೆಸೊಪ್ಪನ್ನು ತುರುಕಿಕೊಂಡಿರುವುದರಲ್ಲಿ, ಗಳಿ
ಗೊಮ್ಮೆ ನಶ್ಯದ ಡಬ್ಬಿ ತೆರೆದು ನಶ್ಯವನ್ನು ಮೂಗಿಗೇರಿಸುವುದರಲ್ಲಿ ಏನೂಗೌರವವಿ
ಇವು ಮೂರೂ ಬಹಳ ಕೊಳಕು ಅಭ್ಯಾಸಗಳು.



# ನಮನ ಸಪ್ತಕ

– ಹೆಚ್.ಎಸ್. ಗುರುಸಿದ್ದಪ್ಪ

ಶಿವಕುವರ ಶ್ರೀ ಗುರುವೆ ನಮನವು । ಶಿವಕುವರ ಸದ್ಗುರುವೆ ನಮನವು ।
ಶಿವಕುವರ ಹೃದ್ಗುರುವೆ ನಿನ್ನಡಿದಾವರೆಗೆ ನಮನ ॥
ಶಿವಕುವರ ಚಿದ್ಗುರುವೆ ನಮನವು । ಶಿವಕುವರ ಮದ್ಗುರುವೆ ನಮನವು ।
ಶಿವಕುವರ ನಮನಗಳು ಘನತರ ತ್ರಿವಿಧದಾಸೋಹಿ ॥೧॥

ವಸುಧೆಯೊಳಗವತರಿಸಿ ಬಂದಿಹ । ಅಸಮ ನೇತ್ರನರೂಪ ಮಹಿಮನೆ
ಅಸಮಪಾವನ ಸಿದ್ಧಗಂಗೆಯ ಮಹಮಠಾಧೀಶ ॥
ಅಸಮಗುರುವರ ಸಿದ್ಧಲಿಂಗನ । ಅಸಮ ಚರಣದ್ವಯವು ಮೆಟ್ಟಿದ ।
ಅಸಮಭೂಸುಕ್ಷೇತ್ರದಧಿಪತಿ ಪೂಜ್ಯನಮನಗಳು ॥೨॥

ಕುಶಲವನು ಸಕಲರಿಗೆ ಬಯಸುತ । ಕುಶಲವನು ಸಕಲರಿಗೆ ನೀಡುತ ।
ಕುಶಲಮಯವನ್ನಾಗಿಸಲು ಈ ಜಗವನೆಡಬಿಡದೆ ॥
ಕುಶಲಮತಿ ನೀನಾಗಿ ಶ್ರಮಿಸುವ । ಕುಶಲ ಭೂಷಣ ಕುಶಲಪೂರಣ ।
ಕುಶಲಕಾರಣ ಸಿದ್ಧಗಂಗಾಧೀಶ ನಮನಗಳು ॥ ॥೩॥

ಮಾರವನು ಪರಿಗಟ್ಟಿ ನಿಲ್ಲುತ । ಮಾರನನು ಸದೆಬಡೆದು ಕೊಲ್ಲುತ ।
ಮಾರನನು ಸುಟ್ಟುರುಹಿಬಿಟ್ಟಹ ಬಿರುದ ಧರಿಸಿರುತ ॥
ಮಾರನೆಂದಿಗು ಸುಳಿಯದಂದದಿ । ದೂರದಲ್ಲಿಯೆ ನಿಲ್ಲಿಸಿರುತಿಹ ।
ಮಾರಹರಗುರು ಶಿವಕುಮಾರೇಶ್ವರನೆ ನಮಗಳು ॥೪॥

ರವಿಯ ತೆರದಲಿ ನಾಡಿನಲಿಬಲು । ಕವಿದ ಅಜ್ಞಾನಾಂಧಕಾರವ ।
ಜಗದಿ ಬಿಡಿಸುವ ಧೀರವೀರನೆ ಶೂರಪ್ರತಿನಿತ್ಯ ॥
ಭವಿಯ ಭಕ್ತನ ಮಾಡಲಿಕೆ ನೀ । ಬುವಿಯೊಳಗೆ ಸಂಚರಿಪ ಸುರತರು ।
ಶಿವಕುವರ ಭವಹರನೆ ಪ್ರಣವಾಕಾರ ನಮನಗಳು ॥೫॥

ಸ್ವಾಮಿಯಾದವ ಜಗದಿಖಂಡಿತ । ನೇಮಿಯಾಗಿರಬೇಕು' ಎಂಬುದ ।
ನೇಮದಿಂದಾಚರಿಸಿ ತೋರಿಪ ಘನಮಹಾಸ್ವಾಮಿ ॥
ಕಾಮಕ್ರೋಧಾದಿಗಳನರಿಯುದ । ಆ ಮಹಾಶಿವಮಂತ್ರರೂಪನೆ ।
ಸ್ವಾಮಿ ನಿರುಪಮ ಶಿವಕುಮಾರೇಶ್ವರನೆ ನಮನಗಳು ॥೬॥

ಮಿಥ್ಯತಥ್ಯದ ಭೇದವನು ಪ್ರತಿ । ನಿತ್ಯವೂ ಭಕ್ತರಿಗೆ ಸಾರುವ ॥
ಉತ್ತಮೋತ್ತಮ ಪುರುಷಮೂರುತಿ ಸಚ್ಚಿದಾನಂದ !
ನಿತ್ಯವೂ ನಿನ್ನಡಿಯ ಭಜಿಪಸು । ಚಿತ್ತವನು ಕರುಣಿಪುದು ಕಣ್ಮಣಿ ।
ಸತ್ಯಮೂರುತಿ ದಿವ್ಯಭವ್ಯ ಜ್ಯೋತಿ ನಮನಗಳು. ॥೭॥

# ಬಸವಣ್ಣನವರು ರೂಪಿಸಿದ ಧರ್ಮ ವಿಶ್ವಧರ್ಮ ಹೇಗೆ

ಶ್ರೀಮತಿ ಕಮಲಮ್ಮ ಚ. ಹೊಸಮನಿ-ಶರಣಶ್ರೀ

" ಮರ್ತ್ಯಲೋಕದ ಮಹಾಮನೆಯು ಹಾಳಾಗಬಾರದೆಂದು ಕರ್ತನಟ್ಟಿದ ನೊಬ್ಬ ಶರಣನ" ಎಂದು ಮಹಾನುಭಾವ ಬಸವಣ್ಣನವರ ಬಗೆಗೆ ಅಲ್ಲಮಪ್ರಭು ಗಳು ನುಡಿದಿದ್ದಾರೆ.

ಸುಮಾರು 12 ನೇ ಶತಮಾನದಲ್ಲಿ ವಿಜಾಪುರ ಜಿಲ್ಲೆಯ ಬಾಗೇವಾಡಿ ಗ್ರಾಮದ ಮಾದರಸ ಮತ್ತು ಮಾದಲಾಂಬಿಕೆಯರ ಪವಿತ್ರ ಗರ್ಭಾಂಬುಧಿಯಲ್ಲಿ ಬಸವಣ್ಣ ನವರ ಜನನವಾಯಿತು. ಇದೇ ಸಮಯದಲ್ಲಿ ಕೂಡಲ ಸಂಗಮದಿಂದ ಅನಿರೀಕ್ಷಿತ ವಾಗಿ ಜಾತವೇದ ಮುನಿಗಳು ಆಗಮಿಸಿ ಮಗುವಿಗೆ ಶುಭಾಶೀರ್ವಾದಗಳನ್ನಿತ್ತರು ಮಗು ಬೆಳೆದಂತೆ ಶಿವಪೂಜೆ, ಶಿವನಾಮ ಸಂಕೀರ್ತನೆಗಳಲ್ಲಿ ಲೀನವಾಗುತ್ತಾ ಹೋದಂತೆಲ್ಲಾ ಭಕ್ತಿಯ ಪ್ರಭೆ ಮಗುವನ್ನಾವರಿಸಿ ಬ್ರಾಹ್ಮಣ್ಯದಲ್ಲಿದ್ದ ನಂಬಿ ಮಾಯವಾಗುತ್ತಾ ಬಂದಿತು. ಉಪನಯನವನ್ನು ತಿರಸ್ಕರಿಸಿ ಜನಿವಾರವನ್ ಕಿತ್ತೆಸೆದು ವೀರಶೈವಮತ ಸ್ಥಾಪನೆಗೆ ಕಾರಣರಾದರು.

ಜನತೆಯ ಮೂಢನಂಬಿಕೆ ಮತ್ತು ಜಾತೀಯತೆಗಳ ಅಂಧಕಾರದಲ್ಲಿ ತೊಳ ತ್ತಿರುವುದನ್ನು ಕಂಡು ಅದನ್ನು ಹೋಗಲಾಡಿಸಲು ಕಂಕಣ ತೊಟ್ಟರು. ಈ 20ನೇ ಶತಮಾನದಲ್ಲಿ ಇರುವಷ್ಟು ಜನಸಂಖ್ಯೆ 12 ನೆಯ ಶತಮಾನದಲ್ಲಿಂದಿದ್ದರೂ ಕೂ ತೀಕ್ಷ್ಣಮತಿಯಾದ ಬಸವಣ್ಣನವರು " ಕಾಯಕವೇ ಕೈಲಾಸ " ವೆಂದು ಪ್ರ ಯೊಬ್ಬ ವ್ಯಕ್ತಿಯೂ ದುಡಿದು ಉಣ್ಣಲು ಆದೇಶವಿತ್ತರು. ಜನರು ಸುಖ ಶಾಂತಿಯಿಂ ಇರಬೇಕಾದರೆ ಕಾಯಕ ಬೇಕೇ ಬೇಕು. ಮಾಡುವ ಕಾಯಕದಲ್ಲಿ ಮೇಲುಕೀಳೆಂ ಭೇದವನಿಡದೆ ನಿಷ್ಠೆಯಿಂದ ನಿರ್ವಹಿಸಬೇಕು. ತನ್ನ ಜೀವನ ನಿರ್ವಹಣೆಗಾಗಿ, ಜನರಿ ತಕ್ಕಾಗಿ ಪರಿಶುದ್ಧತೆಯಿಂದ ಕೂಡಿದ ಕಾಯಕವನ್ನು ಮಾಡಿ " ಪರೋಪಜೀವಿ ಯಾಗಿ ಬಾಳಲು ಕಲಿಸಿದರು.

ಬಸವಣ್ಣನವರು ಕೂಡಲಸಂಗಮ ಕ್ಷೇತ್ರದಲ್ಲಿ ನಿಂತು ಭಕ್ತಿಯನ್ನು ಸಾ ವ್ಯಕ್ತಿಗತವಾಗ ತಾವೊಬ್ಬರೇ ಮುಕ್ತಿ ಪಡೆಯಬಹುದಿತ್ತು. ಆದರೆ ಅವರು ತ ಕಲಿತ ವಿದ್ಯೆ, ಸಾಧಿಸಿದ ಸಿದ್ಧಿ ಇವುಗಳ ಸದ್ವಿನಿಯೋಗವು ಸಮಾಜದ ಎ ವ್ಯಕ್ತಿಗಳಿಗೂ ಲಭಿಸಿ ತಮ್ಮಂತೆಯೇ ಇತರರೂ ಹಿತವಾಗಿ ಬಾಳಬೇಕೆಂಬ ಆದ ದಿಂದಾಗ ಕಲ್ಯಾಣಕ್ಕೆ ಬಂದು ಬಿಜ್ಜಳರಾಜ್ಯನಲ್ಲಿ ಮಹಾಮಂತ್ರಿಯ ಕಾಯಕವ

ಕೈ ಕೊಂಡರು. ರಾಜಕೀಯ ಕ್ಷೇತ್ರಗಳಲ್ಲಿಯೂ ಮಹಾಕ್ರಾಂತ್ರಿಯನ್ನುಂಟು ಮಾಡಿದರು. ಕಾಯಕ ತತ್ವವು ಸಮಾಜದ ಆರ್ಥಿಕ ರಂಗದ ಅಭಿವೃದ್ಧಿಗೆ ಕಾರಣವೆಂದರು.

ಸಕಲ ಶಾಸ್ತ್ರಪಾರಂಗತರಾಗಿದ್ದ ಬಸವಣ್ಣನವರು ಸ್ಥಾವರಲಿಂಗ ಪೂಜೆಯನ್ನು ತಿರಸ್ಕರಿಸಿ ಅಂಗದ ಮೇಲೆ ಲಿಂಗವನ್ನು ಧರಿಸಿ ಇಷ್ಟಲಿಂಗದಲ್ಲಿ ಸಂಗಮನಾಥನನ್ನು ಸಾಕ್ಷಾತ್ಕರಿಸಿಕೊಂಡರು. ‹‹ ಆವ ಕುಲದವರಾದರೇನು? ಶಿವಲಿಂಗವಿದ್ದವನೇ ಕುಲಜ, ಲಿಂಗವಿದ್ದಡೆ ಹೊಲೆಯನಿಲ್ಲ ” ಎಂದು ಜಾತಿ ಮತಗಳಲ್ಲಿ ಭಿನ್ನ–ವಿಭಿನ್ನವಾಗಿದ್ದ ಸಮಾಜ ಒಂದಾಗಬೇಕೆಂದರು. “ ಕೊಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ, ಸಕಲ ಜೀವಾತ್ಮರಿಗೆ ಲೇಸನೇ ಬಯಸುವವರು ’’ ಎಂಬುದು ಅವರ ಘನವಾದ ಸಂದೇಶ. ಕೂಡಿ ಬಾಳುವುದೇ ಸಹಜ ಧರ್ಮ ಎಂಬ ಬಸವಣ್ಣನ ವಾಣಿಯಲ್ಲಿಯೇ ವಿಶ್ವ ಸಂದೇಶ ಅಡಗಿದೆ.

“ ಜಾತಿ ಸೂತಕವಿಡಿದು ಸೂತಕವನರಸುವೆ. ಜ್ಯೋತಿವಿಡಿದು ಕತ್ತಲೆಯನರಸುವೆ. ಇದೇಕೋ ಮರುಳ ಮಾನವ ” ಎಂದು ಪಂಚಸೂತಕಗಳು ದೇಹದ ಸಹಜಕ್ರಿಯೆಗಳಾದ್ದರಿಂದ ಲಿಂಗಾಂಗಿಯಾದವನಿಗೆ ಸೂತಕದ ಸೋಂಕಿಲ್ಲವೆಂದು ಹೇಳಿದ್ದಾರೆ. ಮೋಕ್ಷ ಸಂಪಾದನೆಯ ಮಾರ್ಗವನ್ನು ಹೆಣ್ಣು-ಗಂಡೆಂಬ ಭೇದವಿಲ್ಲದೆ ಎಲ್ಲರೂ ಪಡೆಯಬಹುದೆಂದು ತಿಳಿಸಿದರು. ‹‹ ಕಾಲೇ ಕಂಬ, ದೇಹವೆ ದೇಗುಲ, ಶಿರವೇ ಹೊನ್ನ ಕಳಶವಯ್ಯಾ ” ಎಂದು ಶಿವನಿಗೆ ಬೇರೆ ದೇವಾಲಯದ ಆವಶ್ಯಕತೆಯಿಲ್ಲ ಎಂದಿದ್ದಾರೆ. ಸೃಷ್ಟಿಕರ್ತನಾದ ಪರಮಾತ್ಮನೇ ಬಸವಣ್ಣನ ಬಾಳಿನ ಉಸಿರು. ‹‹ ಎತ್ತೆತ್ತ ನೋಡಿದಡೆ ಅತ್ತತ್ತ ನೀನೇ ದೇವಾ ’’ ಎಂದು ಅಪ್ರತಿಮ ಲಿಂಗವನ್ನು ಕರಸ್ಥಳದ ಕುರುಹಾಗಿ ಮಾಡಿಕೊಂಡ ಮಹಾನುಭಾವಿಗಳು ಬಸವಣ್ಣನವರು.

ಸ್ತ್ರೀಯರಿಗೆ ಧಾರ್ಮಿಕ ಸ್ವಾತಂತ್ರ್ಯವಿಲ್ಲದೆ ಆಕೆಯನ್ನು ಕೀಳಾಗಿ ಕಾಣುವುದನ್ನು, ವಿಧವೆಯಾದಾಗ ಕುರೂಪ ಗೊಳಿಸಿ ಹಿಂಸಿಸುವುದನ್ನು ಕಂಡು ಮನ ನೊಂದು ಬಸವಣ್ಣನವರು ಸ್ತ್ರೀಯೂ ಪುರುಷನಂತೆ ಸಮಾಜದ ಒಂದು ಅಂಗ. ಆಕೆ ಪುರುಷನಿಗಿಂತಲೂ ಯಾವುದರಲ್ಲಿಯೂ ಕಡಿಮೆಯಲ್ಲ ಎಂದು ಸ್ತ್ರೀಯನ್ನು ಮಹಾಮಾತೆ, ಮಹಾದೇವಿ, ಕುಲಸತಿ ಎಂದು ಕರೆದಿದ್ದಾರೆ. ಆಕೆಗೆ ನ್ಯಾಯವಾಗಿ ಸಲ್ಲಬೇಕಾದ ಗೌರವವನ್ನು ಸಲ್ಲುವಂತೆ ಮಾಡಿದ್ದಾರೆ. ಹೆಣ್ಣಿಗೆ ಶಿಕ್ಷಣವನ್ನಷ್ಟೇ ಅಲ್ಲದೆ ಧಾರ್ಮಿಕ ವಿಧಿ ವಿಧಾನಗಳಲ್ಲಿ ಸಾಮಾಜಿಕ ಕ್ಷೇತ್ರಗಳಲ್ಲಿ ಭಾಗವಹಿಸುವ ಹಕ್ಕನ್ನು ಒದಗಿಸಿ ಕೊಟ್ಟರು.

ಧರ್ಮದಲ್ಲಿದ್ದ ಮೂಢನಂಬಿಕೆಗಳನ್ನು ತಡೆಗಟ್ಟಲು ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಇಷ್ಟಲಿಂಗದ ಪ್ರಭಾವದಿಂದಾಗಿ, ಹಿಂಸಾತ್ಮಕ ಕಾರ್ಯಗಳು ಮೂಲೆ ಗುಂಪಾದವು. ಯಜ್ಞ-ಯಾಗ, ಪ್ರಾಣಿವಧೆ, ಮಾಂಸ ಭಕ್ಷಣೆಗಳು ಹೇಳ ಹೆಸರಿಲ್ಲದಂತಾದುವು. ಧರ್ಮದ ಬಗ್ಗೆ ಅವರಿಗಿದ್ದ ಭಾವನೆಯೇ ಈ ವಚನವಾಗಿ ರೂಪುಗೊಂಡಿದೆ. "ದಯವಿಲ್ಲದ ಧರ್ಮವಾವುದಯ್ಯಾ. ದಯೆಯೆ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ' ದಯವೇ ಧರ್ಮದ ಮೂಲವಯ್ಯಾ". ಬಸವಣ್ಣನವರು ಸಾಧಿಸಿದುದು ಬೋಧಿಸಿದುದು ವಿಶ್ವಧರ್ಮವನ್ನು. ಅವರ ದೃಷ್ಟಿ ಯಾವುದೇ ಒಂದು ಮತಕ್ಕಾಗಲಿ ಪಂಥಕ್ಕಾಗಲಿ ಸೀಮಿತವಾದುದಲ್ಲ ಅವರ ನಡೆ ನುಡಿಗಳನ್ನು ವೀಕ್ಷಿಸಿದರೆ ಅವರಲ್ಲಿದ್ದ ವಿಶಾಲ ಮನೋಭಾವನೆಯಲ್ಲಿ ಅಡಕವಾಗಿರುವ ವಿಶ್ವದೃಷ್ಟಿ ಸ್ಪಷ್ಟವಾಗುತ್ತದೆ.

ಬಸವಣ್ಣನವರ ವಾಣಿಯಲ್ಲಿ ಹೃದಯದ ಮಿಡಿತವಿದೆ. ಜನತೆಯದ್ಧರಿಸುವ ಜ್ಞಾನಾಮೃತವಿದೆ. ಸತ್ಯನಿಷ್ಟೆ, ನೀತಿ-ನಿಯಮ, ಸದಾಚಾರ ಸಂಪನ್ನತೆಗಳು ಅವರಲ್ಲಿ ತುಂಬಿ ತುಳುಕುತ್ತಿವೆ. ಬಡವ-ಬಲ್ಲಿದರೆಂಬ ಭೇದ ಭಾವವನ್ನು ಹೊಡೆದೋಡಿಸುವ ಸಲುವಾಗಿ ಹೀಗೆ ಹೇಳಿದ್ದಾರೆ; "ಹಾವು ತಿಂದವರ ನುಡಿಸಬಹುದು. ಗರ ಹೊಡೆದವರ ನುಡಿಸಬಹುದು, ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯಾ, ಬಡತನವೆಂಬ ಮಂತ್ರವಾದಿ ಹೋಗಲು ಒಡನೆ-ನುಡಿದವರು ಕೂಡಲ ಸಂಗಮದೇವಾ ಎಂದು ಹಣದ ಮದದಿಂದ ಓಲಾಡುವ ವ್ಯಕ್ತಿಯಾದರೆ ಆತನಿಗೂ, ಸಮಾಜಕ್ಕೂ ಅನಿಷ್ಟವೆಂದು ಹೇಳಿದ್ದಾರೆ.

ಬಸವಣ್ಣನವರು ಎಷ್ಟು ಭಾವುಕರಾಗಿದ್ದರೋ ಅಷ್ಟೇ ವಿಚಾರವಂತರೂ ಆಗಿದ್ದರು. ಅವರ ದೃಷ್ಟಿಯಲ್ಲಿ "ದೇವಲೋಕ ಮರ್ತ್ಯಲೋಕ"ವೆಂಬವು ಬೇರೆಯಾಗಿರಲಿಲ್ಲ. "ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ, ಅನಾಚಾರವೇ ನರಕ" ಎಂದು ಘನವಾದ ಸಂದೇಶವನ್ನು ಸಾರಿದ್ದಾರೆ. ಅವರು ಆಡುವ ಪ್ರತಿ ಮಾತಿನಲ್ಲಿಯೂ ಜ್ಯೋತಿರ್ಲಿಂಗದ ಪ್ರಭೆ ಪ್ರಕಾಶಿಸುತ್ತಿರುತ್ತದೆ.

ಬಸವಣ್ಣನವರು ಕನ್ನಡ ಸಾಹಿತ್ಯದಲ್ಲಿ ಒಂದು ಮಹಾಕ್ರಾಂತಿಯನ್ನುಂಟು ಮಾಡಿದರು. ಅಚ್ಚಕನ್ನಡದಲ್ಲಿ ಸಾಮಾನ್ಯ ಜನರಿಗೂ ತಿಳಿಯುವಂತೆ ವಚನ ಸಾಹಿತ್ಯವೆಂಬ ಗದ್ಯ ಸಾಹಿತ್ಯದಲ್ಲಿ ವೀರಶೈವಧರ್ಮದ ಪ್ರಸಾರಕ್ಕಾಗಿ ಜನತೆಯ ಉದ್ಧಾರಕ್ಕಾಗಿ ಬಳಸಿಕೊಂಡರು. ಇದರಿಂದಾಗಿ ಧರ್ಮ ಹಾಗು ಸಾಹಿತ್ಯ ಪ್ರತಿಯೊಬ್ಬರ ಹೃದಯವನ್ನು ತಲುಪಿ ಕನ್ನಡ ಸಾಹಿತ್ಯದಲ್ಲಿ ಹೊಸ ಹೊಸ ಗ್ರಂಥಗಳು ಹೊರ ಬರಲು ಸಹಾಯಕವಾಯಿತು. ಇದರಿಂದಾಗಿ ಮೂರು ಬಗೆಯ

ಾಭಗಳಾದವು: 1) ಸರ್ವಧರ್ಮಸಮನ್ವಯ 2) ವೀರಶೈವ ಧರ್ಮದ ಪ್ರಚಾರ 3) ನೀತಿಯ ತತ್ವಗಳನ್ನು ಜನಮನದಲ್ಲಿ ಪ್ರಸಾರ ಪಡಿಸಿದ್ದು. ಅಲ್ಲದೆ ಜನರಲ್ಲಿ ಸಾಹಿತ್ಯದ ಬಗ್ಗೆ ಹೆಚ್ಚು ಅಭಿರುಚಿ ಬೆಳೆಯಲು ಕಾರಣವಾಯಿತು.

ಕೈಲಾಸಮಯವಾದ ಕಲ್ಯಾಣದಲ್ಲಿ ಭಕ್ತಿ ಭಂಡಾರಿ ಬಸವಣ್ಣನವರು 'ಅನುಭವ ಮಂಟಪ"ವನ್ನು ಸ್ಥಾಪಿಸಿದರು ಶೂನ್ಯಸಿಂಹಾಸನಕ್ಕೆ ಅಲ್ಲಮ ಪ್ರಭುಗಳನ್ನು ಅಧ್ಯಕ್ಷರನ್ನಾಗಿ ಮಾಡಿದರು. ಶುಷ್ಕ ಕರ್ಮಗಳಿಂದ ಜಿಗುಪ್ಸೆಗೊಂಡು ಬಳಲುವ ಅನೇಕ ಜನರು ತಮ್ಮಂತರಂಗದ ಜ್ಞಾನ ಪಿಪಾಸೆಯನ್ನು ಭಕ್ತಿ ಮಾರ್ಗದಿಂದ ತಣಿಸಿಕೊಳ್ಳುವ ಸಲುವಾಗಿ ಕಲ್ಯಾಣದ ಮಹಾಮನೆಗೆ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಬರತೊಡಗಿದರು. ಬಸವಣ್ಣನ ಮಹಾಮನೆ ಒಂದುಕುಟುಂಬಕಷ್ಟೇ ಸೀಮಿತವಾಗದೆ ವಿಶ್ವ ಕುಟುಂಬಿಯಾಗಿ ನಿಂತಿತು. ಇಲ್ಲಿಗೆ ಸುತ್ತಲಿನ ಅನೇಕ ರಾಜ್ಯಗಳಿಂದಲೂ ಜನರು ತಂಡೋಪತಂಡವಾಗಿ ಬರತೊಡಗಿದರು. ಇಲ್ಲಿ ನಡೆಯುವ ಅನುಭವಗೋಷ್ಠಿಯಲ್ಲಿ ಸರ್ವರೂ ಸಮಾನರು. ಸರ್ವರ ಹಿತಕಾರಿ ಯಾಗಬೇಕೆಂಬುದೇ ಈ ಗೋಷ್ಠಿಯ ತಳಹದಿ. ಇಲ್ಲಿ ವಿಚಾರ ಮಾಡುವ ಸ್ವಾತಂತ್ರ್ಯ ಎಲ್ಲರಿಗೂ ಇದೆ ಇಲ್ಲಿ ಒಡಮೂಡಿದ ತತ್ವಗಳು ಧರ್ಮದ ತಳ ಹದಿಯದಿಯನ್ನು ರೂಪಿಸಿಕೊಟ್ಟಿತು ಈ ಅನುಭವ ಮಂಟಪ. ಇಲ್ಲಿ ನೂರಾರು ಜನ ಸ್ತ್ರೀ ಪುರುಷ, ಹಿರಿಯ, ಅಂತ್ಯಜ, ಕುಲಜರೆಲ್ಲರೂ ತಮ್ಮ ಅನುಭವದ ಅಮೃತ ವಾಣಿಯನ್ನು ಪ್ರಕಟಪಡಿಸಿ, ಅದರ ಸವಿಯನ್ನು ಎಲ್ಲರೂ ರಸವತ್ತಾಗಿ ಸವಿಯು ತ್ತಿದ್ದರು. ಇದರಿಂದಾಗಿ ಕನ್ನಡಕ್ಕೆ ಉತ್ಕೃಷ್ಟವಾದ ಅನುಭಾವ ಸಾಹಿತ್ಯ ಹಾಗೂ ವಚನ ಸಾಹಿತ್ಯಗಳು. ಇಂದು ವಿಶ್ವದಲ್ಲೇ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿವೆ.

ಅಣ್ಣ ಬಸವಣ್ಣನವರು ಜಾತೀಯತೆಯನ್ನು ಎಷ್ಟು ಕಟುವಾಗಿ ಕಂಡಿದ್ದಾರೆಂದರೆ 'ಕುಲವೇನೋ, ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಕೂಡಲ ಸಂಗಮ ದೇವನ ಶರಣರೇ ಕುಲಜರು" ಎಂದು ನುಡಿದಿದ್ದಾರೆ. ಅಂತೆಯೇ ಬ್ರಾಹ್ಮಣ ಮಧುವರಸ ಮತ್ತು ಅಂತ್ಯಜ ಹರಳಯ್ಯ ಶರಣರ ಮಕ್ಕಳ ನಡುವೆ ಅಂತರ್ಜಾ ತೀಯವಿವಾಹವನ್ನು ಮಾಡಿಸಿ ಇಡೀ ಭಾರತದೇಶಕ್ಕೆ ಒಂದು ಹೊಸ ಇತಿಹಾಸವನ್ನೇ ಕಲ್ಪಿಸಿಕೊಟ್ಟಿರುವುದರ ಜೊತೆಗೆ ಬಹು ದೊಡ್ಡ ಕ್ರಾಂತಿಯನ್ನುಂಟು ಮಾಡಿ ದ್ದಾರೆ ಅವರು ದೇವರಲ್ಲಿಟ್ಟ ಭಕ್ತಿ, ಶ್ರದ್ಧೆ, ಆತ್ಮವಿಶ್ವಾಸಗಳು ಅಪಾರ. ಕೂಡಲ ಸಂಗಮನನ್ನು ಸದಾ ಕಾಲ ನೆನೆದರೆ ಮಾಡಿದ ಪಾಪವು "ಉರಿಗೊಡ್ಡಿದ ಅರಗಿನಂತೆ" ಕರಗುತ್ತದೆ ಎಂದ ಸದಾ ಕಾಲವು ಅವನಿಗೆ ಮೊರೆಯಿಡುತ್ತಿದ್ದರು.

ಭಕ್ತಿಭಂಡಾರಿ ಬಸವಣ್ಣನವರು ಸ್ಥಾಪಿಸಿದ ಧರ್ಮ ವಿಶ್ವಧರ್ಮವಾಗಿದೆ. ಅವರ ಸಂದೇಶ ವಿಶ್ವವೇದ್ಯವಾಗಿಯೂ ಇಂದಿಗೂ ಜನಮನದಲ್ಲಿ ಅಚ್ಚಳಿಯದೆ ಉಳಿದಿವೆ. ದೀಪ ನಂದಿದರೇನು ? ಅದರ ಪ್ರಕಾಶ ಮಾತ್ರ ಇಂದಿಗೂ ಚಿರಂತನವಾಗಿ ಬೆಳಕು ನೀಡುತ್ತಲಿದೆ.

# ಬಸವಣ್ಣನವರ ಉಪಮೆಗಳು

- ವಿದ್ವಾನ್ ಕೆ.ಎಂ. ರೇವಣಸಿದ್ಧಯ್ಯ, ಎಂ.ಎ. ನಿವೃತ್ತ ಪ್ರಾಚಾರ್ಯರು.

ಭರತಖಂಡದ ಹಾಗೂ ಕನ್ನಡ ನಾಡಿನ ಧಾರ್ಮಿಕ ಸಾಮ್ರಾಜ್ಯದ ಇತಿಹಾಸದಲ್ಲಿ ಹನ್ನೆರಡನೆ ಶತಮಾನವು ಅತ್ಯಂತ ಪವಿತ್ರವು ಸ್ಮರಣೀಯವು ಆದ ಕ್ರಾಂತಿಕಾರಕವಾದ ಸುವರ್ಣಯುಗ, ಆಗ ನಡೆದ ಧಾರ್ಮಿಕ, ಸಾಮಾಜಿಕ, ಮತ್ತು ಆರ್ಥಿಕ ಕ್ರಾಂತಿಯು ಹಿಂದೂ ಧರ್ಮದ ಮೇಲೆ ಮಹತ್ತರವಾದ ಪರಿಣಾಮವನ್ನು ಬೀರಿತು. ಆ ಮಹಾ ಕ್ರಾಂತಿಯ ನೇತಾರರಾದ ಶಿವಶರಣರು ಧರ್ಮದೇವತೆಗೆ ತಮ್ಮದೇ ಆದ ವಿಚಾರವಂತಿಕೆಯ ಅತ್ಯನರ್ಘರತ್ನಾಭರಣಗಳನ್ನು ತೊಡಿಸಿ ಅಲಂಕರಿಸಿದರು. ಧರ್ಮದ ಹೆಸರಿನಲ್ಲಿ ಪ್ರಚಲಿತವಾಗಿದ್ದ ಅಂಧಶ್ರದ್ಧೆಗಳ ಆಚಾರದ. ಅನಿಷ್ಟ ಸಂಪ್ರದಾಯಗಳ, ನಂಬಿಕೆಯನ್ನು ಅಳಿಸಿ, ಧಾರ್ಮಿಕ ವಿಧಿವಿಧಾನಗಳ ಆಚಾರದ ಅಂತರಂಗದ ನೈಜ ಮೌಲ್ಯಗಳನ್ನು ತಿಳಿಸಿ ಅಜ್ಞಾನಾಂಧಕಾರದಲ್ಲಿ ಮುಳುಗಿ ಕಂಗೆಟ್ಟು ದಾರಿಕಾಣದ ದೀನ ದಲಿತ ಜನತೆಯನ್ನು ಸುಜ್ಞಾನ ದೀವಿಗೆಯ ವೈಚಾರಿಕ ಬೆಳಕಿನ ದಾರಿಗೆ ಕರೆತಂದರು. ಧಾರ್ಮಿಕ ವಿಧಿವಿಧಾನಗಳ ವಿವರಣೆಗಳು ಮತ್ತು ತಾತ್ವಿಕ ವಿಷಯಗಳ ವಿಮರ್ಶೆಗಳೆಲ್ಲಾ ಕೇವಲ ಪಂಡಿತರ ಸ್ವತ್ತಾಗಿದ್ದು ಸಂಸ್ಕೃತ ಭಾಷೆಯಲ್ಲಿ ಅವಿತುಕೊಂಡಿದ್ದು, ಜನ ಸಾಮಾನ್ಯರಿಗೆ ಜೀವಾತ್ಮ ಪರಮಾತ್ಮನ ವಿಷಯಕವಾದ ಧಾರ್ಮಿಕ ಮೌಲ್ಯಗಳು ಸುಲಭವಾಗಿ ಅರ್ಥವಾಗದ ವಿಷಯಗಳಾಗಿದ್ದ ಸಮಯದಲ್ಲಿ, ಕನ್ನಡನಾಡಿನ ಸಾಮಾನ್ಯ ಜನತೆಯ ಆಡುಭಾಷೆಯಾದ ತಿಳಿಗನ್ನಡದ ಸರಳ ಗದ್ಯರೂಪದಲ್ಲಿ ವಚನಸಾಹಿತ್ಯ ಸುಧೆಯನ್ನುಹರಿಸಿ ಪಾಮರ ಜನತೆಗೆ ಜ್ಞಾನಾಮೃತ ಪಾನ ಮಾಡಿಸಿದರು. ಶರಣರ ಅವಚನೋಪನಿಷತ್ತಿನ ಒಂದೊಂದು ವಚನವೂ ನೀರ್ಬುಗ್ಗೆಯಂತೆ ಜನತೆಯ ಜ್ಞಾನದಾಹವನ್ನು ಹೋಗಲಾಡಿಸುವಲ್ಲಿ ಸಮರ್ಥವಾಯಿತು. ಆ ವಚನಗಳಲ್ಲಿ ಸರಸತಿಯ ಸಿರಿಸೊಬಗಿನ ಆಭರಣಗಳಾದ ಅಲಂಕಾರ. ರಸ, ಭಾವಧ್ವನಿಗಳು ತುಂಬಿರುವುದರಿಂದ ಕನ್ನಡ ಸಾಹಿತ್ಯ ದೇವತೆಗೆ ಲಾವಣ್ಯಮಯವಾದ ಆಭರಣಗಳಾದುವು.

ಶರಣವಾಙ್ಮಯದ ಪಿತಾಮಹರಾದ ಬಸವಣ್ಣನವರ ವಚನಗಳಲ್ಲಿ ರಸ, ಧ್ವನಿ, ಅಲಂಕಾರಗಳು ಬಹು ಸುಂದರವಾಗಿ ಚಿತ್ರಿತವಾಗಿವೆ. ಅಲಂಕಾರಗಳಲ್ಲಿ ತಿಲಕಪ್ರಾಯವಾದ ಉಪಮಾಲಂಕಾರದ ವಿನ್ಯಾಸದಲ್ಲಂತೂ ಅಣ್ಣನವರನ್ನು "ವಚನ ಸಾಹಿತ್ಯದ ಕಾಳಿದಾಸ" ಎಂದರೆ ಅತಿಶಯೋಕ್ತಿಯಾಗಲಾರದು. ಕಾಳಿದಾಸ ಮಹಾಕವಿಯ ಉಪಮೆಗಳಂತೆಯೇ ಅಣ್ಣನವರ ಉಪಮೆಗಳೂ ಪ್ರಕೃತಿಯಲ್ಲಿನ ಮರ, ಗಿಡ, ಬಳ್ಳಿ,

ಪಶುಪಕ್ಷಿ ಮೊದಲಾದ ನೈಸರ್ಗಿಕ ವಸ್ತುಗಳನ್ನು ಅವಲಂಬಿಸಿದ್ದರೂ ಅವುಗಳ ಅರ್ಥ ರಸಭಾವಧ್ವನಿಗಳು ಮಾತ್ರ ಧಾರ್ಮಿಕ ಜೀವಿಯ ಅಧ್ಯಾತ್ಮತತ್ವ ವಿಕಾಸದ ಸಾರ ಸರ್ವಸ್ವವಾದ ಭಕ್ತಿರಸಾನುಭವಕ್ಕೇ ಪೂರಕ ಶಕ್ತಿಯಾಗಿ ಮುಮುಕ್ಷುಗಳಿಗೆ ದಾರಿದೀಪ ವಾಗುತ್ತವೆ

ಈಗ ಒಂದೆರಡು ಉಪಮೆಗಳನ್ನು ವಿಮರ್ಶಿಸೋಣ; ನಮ್ಮೆಲ್ಲರಿಗೂ ಚಿರಪರಿಚಿತವಾದ ಸೊಂಪಾಗಿ ಬೆಳೆದಿರುವ ಬಾಳೆಗಿಡವನ್ನು ಭಕ್ತನಜೀವನಕ್ಕೆ ಹೋಲಿಸುವ ಅಣ್ಣನವರ ಈ ಉಪಮೆಯನ್ನು ನೋಡಿ, ''ಮಾಡುವ ಭಕ್ತನಕಾಯ ಬಾಳೆಯ ಕಂಬದಂತಿರಬೇಕು ಮೆಲ್ಲಮೆಲ್ಲನೆ ಹೊರೆಯುತ್ತ ನೋಡಿದರೆ ಒಳಗೆ ಕೆಚ್ಚಿಲ್ಲದಿರಬೇಕು. ಈ ಉಪಮಾನ ದಲ್ಲಿ ಎಷ್ಟೊಂದು ಪವಿತ್ರ ಸದ್ಭಾವನೆಗಳು ತುಂಬಿವೆ. "ಮಾಡುವ ಭಕ್ತನ ಕಾಯು" ಎಂದರೆ ಭಕ್ತಿ, ಧ್ಯಾನ ಅರ್ಚನೆ ಪ್ರಾರ್ಥನೆ, ಹಾಗೂ ಕಾಯಕ ಮಾಡುವ ಭಕ್ತನ ಮನಸ್ಸಿನಲ್ಲಿ ಪರಿಪೂರ್ಣವಾದ, ಅಚಲವಾದ ಶ್ರದ್ಧೆ ತುಂಬಿರಬೇಕು. ಮನಸ್ಸಿನ ಪದರಗಳನ್ನು ಬಿಡಿಸಿ ನೋಡಿದರೆ ನಿಷ್ಕಾಪಟ್ಯ ಭಕ್ತಿರಸವಲ್ಲದೆ ಮತ್ತೇನೂ ಇರ ಬಾರದು. ಬಾಳೆಯ ಕಂಬದ ಹಾಗೆ ಭಕ್ತನ ಕಾಯಕ ಜೀವನ ನಿಷ್ಕಂಟಕ, ನಿಷ್ಕ ಳಂಕವಾಗಿ ಪರಿಶುದ್ಧವಾಗಿರಬೇಕಲ್ಲದೆ, ಅಳ್ಳತಿಟ್ಟುಗಳಂತಹ ಹಮ್ಮು ಬಿಮ್ಮುಗಳಿಂದ ಕೂಡಿರಬಾರದು. ಎಂತಹ ಸನ್ನಿವೇಶ ಪರಿಸರದಲ್ಲಾದರೂ ಸರಿ ತನ್ನ ತನವನ್ನು ಕಾಪಾಡಿಕೊಳ್ಳಬೇಕು. ಅಕ್ಕ ಪಕ್ಕದಲ್ಲಿ ಬೇವಿನ ಮರವಾದರೂ ಇರಲಿ, ಹುಣಸೆ ಮರವಾದರೂ ಬೆಳೆದಿರಲಿ, ತನ್ನ ಬುಡಕ್ಕೆ ಹರಿಯುವ ನೀರು ಬಚ್ಚಲ ನೀರಾಗಲೀ ಕೊಳಚೆ ನೀರಾಗಲೀ ಆದಾವುದರ ಪ್ರಭಾವಕ್ಕೂ ಒಳಗಾಗದೆ ತನ್ನದೇ ಆದ ಸಂಸ್ಕೃತಿ ಅಥವಾ ಸಂಸ್ಕರಣ ಶಕ್ತಿಯಿಂದ ಶುಚಿ, ರುಚಿಯಾದ ಫಲಗಳನ್ನೇ ಬೆಳೆಸಿಕೊಳ್ಳುವ ಬಾಳೆಗಿಡದ ಜೀವನದಂತೆ ಭಕ್ತನ ಜೀವನ ಸತ್ಯಶುದ್ಧವಾಗಿರಬೇಕು. ನಿರಂತರ ಕಾಯ ಕದ ಫಲವಾದ ಬಾಳೆಯ ಗೊನೆ ಬಲಿತು ಭಾರದಿಂದ ತಲೆಬಾಗುವ ಹಾಗೆ ತನ್ನ ಕಾಯಕದ ಫಲ ಕೈ ಸೇರಿದಾಗ, ಭಕ್ತ ಕಿಂಕರ ಭಾವದಿಂದ ತಲೆ ಬಾಗಿ ವಿನಯ ಮತ್ತು ಶೀಲನಾಗಬೇಕು. ಬಾಳೆಯ ಫಲ (ಹಣ್ಣು) ದಂತೆ ಭಕ್ತನ ಕಾಯಕದ ಫಲವೂ ಮತ್ತೆ ಭವಕ್ಕೆ ದಾರಿಯಾಗುವ ಆಶಾಬೀಜಗಳಿಂದ ತುಂಬಿರಬಾರದು. ಎಷ್ಟೊಂದು ರಸಭಾವ ಧ್ವನಿಗಳಿಂದ ಕೂಡಿದೆ ಈ ಉಪಮಾನ : ಸೊಂಪಾಗಿ ಬೆಳೆದಿರುವ ಬಾಳೆಯ ಗಿಡವನ್ನು ಲಲನೆಯರ ಅಂಗಗಳಿಗೆ ಹೋಲಿಸುವ ಉಪಮಾನಕ್ಕೂ ಅಣ್ಣನವರ ಈ ಉಪಮಾನಕ್ಕೂ ಎಷ್ಟು ಅಜಗಜಾಂತರ ?

ಇನ್ನು ಪ್ರಾಣಿಗಳ ಪ್ರಕೃತಿ ಸಹಜವಾದ ಸ್ವಭಾವವನ್ನು ಅವಲಂಬಿಸಿರುವ ಈ ಉದಾಹರಣೆಯನ್ನು ನೋಡಿ ಎಷ್ಟು ಹೃದಯಂಗಮವಾಗಿದೆ ! ಎಲ್ಲರಿಗೂ ಪರಿಚಯ ವಾದ ಪ್ರಾಣಿ ಮರ್ಕಟ. ತುಂಬಾ ಅನುಕರಣ ಸ್ವಭಾವ. ಚಂಚಲ ಪ್ರವೃತ್ತಿಗೆ

ಹೇಳಿ ಮಾಡಿಸಿದ ಪ್ರಾಣಿ. ಕ್ಷಣ ಕ್ಷಣಕ್ಕೂ ಒಂದರಿಂದ ಮತ್ತೊಂದು ಮರಕ್ಕೆ ನೆಗೆತ ಸ್ಥಿರವಾದ ನೆಲೆಯಿಲ್ಲ. "ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನವು. ನಿಂದಲ್ಲಿ ನಿಲ್ಲಲೀಯದೆನ್ನಮನವು. ಹೊಂದಲ್ಲಿ ಹೊಂದಲೀಯದೆನ್ನಮನವು". ಮನ ಎವ-ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋ ಅಂದರೆ ಈ ಸಂಸಾರ ಮತ್ತು ಅದರ ಶಾಶ್ವತ ಬಿಡುಗಡೆಗೆ ಮನಸ್ಸೇ ಕಾರಣ. ಯಾವ ಸಾಧನೆ ಯನ್ನು ಮಾಡಬೇಕಾದರೂ ಮನಸ್ಸಿನ ದೃಢವಾದ ಸಂಕಲ್ಪಬೇಕು. ಆದರೆ ಅದು ಬಹು ಚಂಚಲ. ಆದ್ದರಿಂದಲೇ ಎಲ್ಲಾ ದಾರ್ಶನಿಕರೂ ಈ ಮನಸ್ಸಿನ ಚಂಚಲ ಸ್ವಭಾವವನ್ನು ವರ್ಣಿಸಿ ಅದರ ನಿಗ್ರಹಕ್ಕೆ ಪ್ರಾಧಾನ್ಯತೆ ಕೊಟ್ಟಿದ್ದಾರೆ. ಮನಸ್ಸನ್ನು ಮರ್ಕಟಕ್ಕೆ ಹೋಲಿಸಿರುವ ಅಣ್ಣನವರು ಈ ಉಪಮಾನ ಎಲ್ಲರಿಗೂ ಬಹಳ ಸರಳ ವಾಗಿ ಅರ್ಥವಾಗುತ್ತದೆ. ಕೆಲವರಿಗೆ ಇಂದು ಒಂದು ದೇವರಲ್ಲಿ ನಂಬಿಕೆ ಶ್ರದ್ಧಾ ಭಕ್ತಿಯಾದರೆ ನಾಳೆ ಇನ್ನೊಂದು ಗುಡಿ ಗೋಪುರದಕಡೆ ನೆಗೆತ. ಮಾನವರ ಲೌಕಿಕ ಅಭ್ಯುದಯಕ್ಕಾಗಲೀ ಪಾರಮಾರ್ಥಿಕ ನಿಶ್ರೇಯಸಸಿದ್ಧಿಗಾಗಲೀ ಒಂದರಲ್ಲಿಯೇ ತಲ್ಲೀನವಾಗಿ ಕರ್ತವ್ಯ ನಿಷ್ಠರಾಗಬೇಕು. ಈ ದಿವಸ ಬೆಲ್ಲದ ವ್ಯಾಪಾರ, ನಾಳೆ ಕಬ್ಬಿಣದ ವ್ಯಾಪಾರ, ನಾಡಿದ್ದು ಬಟ್ಟೆ ವ್ಯಾಪಾರ, ಅಥವಾ ಈ ದಿವಸ ವ್ಯಾಪಾರ, ನಾಳೆ ವ್ಯವಸಾಯ ನಾಡಿದ್ದು ಇನ್ನೊಂದು ಕಾಯಕವಾದರೆ ಯಾವುದರಲ್ಲಿಯೂ ಅಭ್ಯುದಯವಿಲ್ಲ. ಅಂತೆಯೇ ಆತ್ಮಕಲ್ಯಾಣವನ್ನು ಪಡೆಯಬೇಕಾದರೆ ಇಂದು ಒಂದು ದೇವರಲ್ಲಿ ಶ್ರದ್ಧಾಭಕ್ತಿ ನಾಳೆ ಮತ್ತೊಂದರಲ್ಲಿ ನಾಡಿದ್ದು ಇನ್ನೊಂದರಲ್ಲಿ ನಂಬಿಕೆ ಯಾದರೆ ಸಿದ್ಧಿ ಹೇಗೆ ಸಾಧ್ಯವಾದೀತು ? ಆದ್ದರಿಂದ ಆತ್ಮಸಾಕ್ಷಾತ್ಕಾರವಾಗಬೇಕಾ ದರೆ ಒಂದರಲ್ಲಿಯೇ ಶ್ರದ್ಧಾಭಕ್ತಿ ಅವಿಚಿನ್ನವಾಗಿ ಮುಂದುವರಿಯಬೇಕು. ಎನ್ನುವ ಭಾವನೆ ಈ ಉಪಮಾನದಿಂದ ಸ್ಪಷ್ಟವಾಗಿ ಅಭಿವ್ಯಕ್ತವಾಗುತ್ತದೆ. ಮನಸ್ಸಿನ ವಿಕಾರ ಮತ್ತು ಚಂಚಲತೆಯ ಬಗ್ಗೆ ಅಣ್ಣನವರ ಅನಿಸಿಕೆ ಹಲವು ಕಡೆ ವ್ಯಕ್ತ-ವಾಗಿದೆ. ಅವೆಲ್ಲವು ಒಳ್ಳೆಯ ಹೋಲಿಕೆಗಳಿಂದ ಭಕ್ತಿಮಾರ್ಗದಲ್ಲಿ ಪ್ರಯಾಣ ಮಾಡುವವರಿಗೆ ಮನಮುಟ್ಟುವಂತೆ ತಿಳುವಳಿಕೆಯನ್ನು ನೀಡುತ್ತವೆ. "ಅಂದಣ-ವನೇರಿದ ಸೊಣಗನಂತೆ ಕಂಡೊಡೆ ಬಿಡದು ಮುನ್ನಿನ ಸ್ವಾಭಾವವನ್ನು" "ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ಸಂಸಾರ ಸಂಗವ ಬಿಡದು ನೋಡೆನ್ನ ಮನವು" ಮನಸ್ಸಿನ ಪ್ರಕೃತಿ ಸ್ವಭಾವ ಚಂಚಲತೆಯನ್ನು ಚಿತ್ರಿಸಲು ಎಂಥಹ ಸುಂದರ ಉಪಮಾನಗಳು.

ಇನ್ನು ಪಕ್ಷಿಗಳನ್ನು ಕುರಿತು ಉಪಮಾನ ಒಂದನ್ನು ವೀಕ್ಷಿಸೋಣ. "ಮಿಂಬುಲಿಗನ ಹಕ್ಕಿಯಂತೆ ನೀರತಡಿಯಲ್ಲಿದ್ದು ಮೂಗ. ಹಿಡಿದು ಧ್ಯಾನವ ಮಾಡುವವರಯ್ಯಾ. ಬಿಟ್ಟ ಮಂಡೆವೆರೆಸಿ ಬಾಯ ಮಿಡಿಕಿಸುತ ಕಣ್ಣುಮುಚ್ಚಿ ಬೆರಳನೆಣಿಸುವರಯ್ಯ." ಮಾನವರು ಮಾಡುವ ಪೂಜೆ' ಧ್ಯಾನ್ಯ, ಪ್ರಾರ್ಥನೆ;

ಅರ್ಚನೆ ಎಲ್ಲಾ ಏಕಾಗ್ರಚಿತ್ತತೆ, ಹಾಗೂ ಶ್ರದ್ಧೆ ಇಲ್ಲದ ಯಾಂತ್ರೀಕೃತ ಡಂಭಾಚಾರ ಪೂಜೆಯಾದರೆ, ನಮ್ಮ ಧ್ಯಾನ ಮೀನು ಹಿಡಿಯಲು ಕೊಳದ ದಡದಲ್ಲಿ ಅಲುಗಾಡದೆ ಒಂಟಿ ಕಾಲಿನಲ್ಲಿ ನಿಂತು ಮೀನು ಬರುವುದಕ್ಕಾಗಿಯೇ ಕಾಯುತ್ತಿರುವ ಬಕ ಪಕ್ಷಿಯಂತಾಗುತ್ತದೆ. ಮೀನು ನೀರಿನಲ್ಲಿ ತನ್ನೆದುರಿಗೆ ಕಾಣುವತನಕವೇ ಬಕ ಪಕ್ಷಿಯ ಏಕಾಗ್ರತೆ ಮಾನವರ ಧ್ಯಾನ, ಐಹಿಕ ಆಶೋತ್ತರಗಳನ್ನು ಹೊಂದುವುದಕ್ಕಾಗಿ ಮಾತ್ರ ಆಗಬಾರದು, ಯಾವುದೋ ಅಪೇಕ್ಷೆಯ ಈಡೇರಿಕೆಯನ್ನು ಮನದಲ್ಲಿಟ್ಟು ಕೊಂಡು ಧ್ಯಾನ, ಪೂಜೆ, ಮಾಡಿದರೆ ಬಕಧ್ಯಾನದಂತೆಯೇ ಸರಿ. ಧ್ಯಾನವು ನಿಷ್ಕಾಮ ವಾಗಬೇಕು ಎನ್ನುವುದೇ ಈ ಸಂದರ್ಭದ ಧ್ವನಿ. ಆದ್ದರಿಂದಲೇ ಬಹಳಷ್ಟು ಜನ ಧ್ಯಾನ ಪೂಜೆ, ಮಾಡಿದರೂ ಅದರ ಪರಾಕಾಷ್ಟತೆಯನ್ನು ಮುಟ್ಟುವುದಿಲ್ಲ ಆದುದರಿಂದಲೇ ಅಣ್ಣನವರು ಕೋಟಿಗೊಬ್ಬ ಭಕ್ತ ಎಂದರು. ಗೀತಾಚಾರ್ಯರೂ ಇದೇ ಅರ್ಥದ ಮಾತನ್ನು ಸ್ಪಷ್ಟವಾಗಿ ಹೇಳುತ್ತಾರೆ. "ಮನುಷ್ಯಾಣಾಂ ಸಹಸ್ರೇಷು ಕಶ್ಚಿತ್ಯತತಿ ಸಿದ್ಧಿಯೇ ಯತತಾಮಪಿಸಿದ್ಧಾನಾಂ ಕಶ್ಚಿನ್ಮಾಂವೇತ್ತಿ ತತ್ವತಃ ಅಂದರೆ ಸಹಸ್ರ ಸಹಸ್ರ ಮಾನವರಲ್ಲಿ ಎಲ್ಲೋ ಒಬ್ಬನು ಮಾತ್ರ ಸಿದ್ಧಿಗಾಗಿ ಪ್ರಯತ್ನಿ ಸುತ್ತಾನೆ. ಹಾಗೆ ಪ್ರಯತ್ನ ಮಾಡುವ ಬಹಳಷ್ಟು ಜನರಲ್ಲಿ ಎಲ್ಲೊ ಎಂದೋ ಒಬ್ಬನು ಮಾತ್ರ ನನ್ನನ್ನು ಚೆನ್ನಾಗಿ ತಿಳಿದುಕೊಂಡಿರುತ್ತಾನೆ ಆದ್ದರಿಂದ ಧ್ಯಾನ ಫಲಾಪೇಕ್ಷೆಯಿಂದ ಮಾಡಬಾರದು. ಡಂಭಾಚಾರಕ್ಕಾಗಿ ಜನ ಮೆಚ್ಚಿಸಲಿಕ್ಕಾಗಿ ತೋರಿಕೆಗಾಗಿ, ಮಾಡಬಾರದು ಎನ್ನುವ ವಿಷಯವನ್ನು ಉಪಮಾನದಿಂದ ಬಹಳ ವಿಷಾದವಾಗಿ ತಿಳಿಸುತ್ತಾರೆ ಅಣ್ಣನವರು.

ಇನ್ನು ಉಪಮಾನಗಳನ್ನು ಕೊಡುವಾಗ ಕೆಲವು ಸಂದರ್ಭದಲ್ಲಿ ತಾವು ಹೇಳ ಬೇಕಾದ ವಿಷಯವನ್ನು ಬಹಳ ಸ್ಪಷ್ಟವಾಗಿ ಮನವರಿಕೆ ಮಾಡಿಕೊಡಲಿಕ್ಕಾಗಿ ಎರ ಕ್ಕಿಂತ ಹೆಚ್ಚಿನ ಉಪಮಾನಗಳನ್ನು ಒಂದೇ ಸಂದರ್ಭದಲ್ಲಿ ವರ್ಣಿಸುವುದುಂಟು ಅದಕ್ಕೆ 'ಮಾಲೋಪಮಾ' ಎನ್ನುತ್ತಾರೆ. ಆಮಾಲೋಪಮೆಗೆ ಅಣ್ಣನವರ ಒಂದ ಉದಾಹರಣೆಯನ್ನು ವಿಮರ್ಶಿಸೋಣ" ಉದಕದೊಳಗೆ ಬಿಯ್ಚಿಟ್ಟ ಬಯಕೆಯ ಕಿ ನಂತಿದ್ದಿತ್ತು, ಸಸಿಯೊಳಗಣ ರಸದ ರುಚಿಯಂತಿದ್ದಿತ್ತು, ನೆನೆಯೊಳಗಣ ಪರಿಮ ದಂತಿದ್ದಿತ್ತು, ಕೂಡಲ ಸಂಗಮದೇವಾ, ಕೆನೆಯ ಸ್ನೇಹದಂತಿದ್ದಿತ್ತು ನಿ ಇರುವು." ಈ ವಚನದಲ್ಲಿ ನಾಲ್ಕು ಉಪಮಾನಗಳಿಂದ ಜೀವಾತ್ಮರಲ್ಲಿ ಪರಮಾತ್ಮ ಇರುವುದನ್ನು ಹೃದಯುಂಗಮವಾಗಿ ಚಿತ್ರಿಸಿರುತ್ತಾರೆ. ನೀರಿನಲ್ಲಿ ಅಡಗಿಸುವ ಮೊಗ್ಗುಗಳಲ್ಲಿ ಅಡಗಿರುವ ಸುವಾಸನೆಯಂತೆ, ಕೆನೆಯಲ್ಲಿ ಅವಿತುಕೊಂಡಿರುವ ಸ್ನೇ ಅಂದರೆ ಜಿಡ್ಡು ಅಥವಾ ತುಪ್ಪದಂತೆ, ಪರಮಾತ್ಮನ ನಿಜಸ್ಥಿತಿಯು ಅತ್ಯಂತ ಸೂಕ್ಷ್ಮ ವಸ್ಥೆಯಲ್ಲಿ ಭಕ್ತನ ಹೃದಯಾಂತರಂಗದಲ್ಲಿ ಅಡಗಿಕೊಂಡಿರುತ್ತದೆ. ನೀರಿನಲ್ಲಿ ಬೆ ಇದೆ, ಆದರೆ ಆ ಬೆಂಕಿ ಅಥವಾ ವಿದ್ಯುತ್ತನ್ನು ಪಡೆಯಬೇಕಾದರೆ ಒಂದು ರ

ಸಿವ್ಹಗಂ

ನೀತಿಗಳನ್ನು ಬಹಳ ಎಚ್ಚರಿಕೆಯಿಂದ ಅನುಸರಿಸಬೇಕು. ಕ್ರಮವರಿತು ಸತತವಾದ ಕಾಯಕದ ಸಾಧನೆಯಾದರೇ, ವಿದ್ಯುತ್ತಿನ ಸಿದ್ಧಿ. ಕ್ರಮ ತಪ್ಪಿದರೆ ಅನರ್ಥ ಅಲ್ಲವೆ? ಅಂತೆಯೇ ಮಾನವರ ಅಂತರಾತ್ಮದಲ್ಲಿರುವ ಪರಮಾತ್ಮನನ್ನು ಕಾಣಬೇಕಾದರೆ ಸತತವಾದ ಸಕ್ರಮದಾಯಕ, ಭಕ್ತಿ ಮಾಡಬೇಕು ಎನ್ನುವುದನ್ನು ಸ್ಪಷ್ಟಪಡಿಸುತ್ತಾರೆ. ಸಸಿಗಳಲ್ಲಿ ರುಚಿಯಾದ ರಸ ಅಡಗಿದೆ ಎಂದ ಮಾತ್ರಕ್ಕೆ ನೀಡಿಯ ಸಸಿ ನೆಟ್ಟ ಕೂಡಲೇ ರಸದ ರುಚಿಯನ್ನು ಆಸ್ವಾದಿಸಲು ಸಾಧ್ಯವೇ ? ಸಸಿ ನೆಟ್ಟು ಅದಕ್ಕೆ ನೀರು ಗೊಬ್ಬರ ಹಾಕಿ ಚೆನ್ನಾಗಿ ಬೆಳೆಸಬೇಕು. ಅದು ಬೆಳೆದು ಹೂ ಬಿಟ್ಟು ಕಾಯಾಗಿ ಹಣ್ಣಾಗಬೇಕು. ಸಿಹಿ ರಸ ತುಂಬಿದ ಆ ಹಣ್ಣು ಆಸ್ವಾದ್ಯವಾನ ಅಲ್ಲವೇ ? ಕಮಲದ ಸಸಿಯಲ್ಲಿ ಅವ್ಯಕ್ತವಾಗಿ ಅಡಗಿರುವ ಕಮಲದ ಪರಿಮಳದಂತೆ ಮತ್ತು ಹಾಲಿನ ಕೆನೆಯಲ್ಲಿರುವ ಜಿಡ್ಡು ಅಥವಾ ತುಪ್ಪವನ್ನು ಪಡೆಯಬೇಕಾದರೆ ಹಸುವಿನಲ್ಲಿ ಹಾಲು ಕರೆಯುವುದರಿಂದ ಪ್ರಾರಂಭಿಸಿ ಎಷ್ಟು ಕಾಯಕ ಪ್ರಕ್ರಿಯೆಗಳಾಗಬೇಕು. ಕೆನೆ ಅಥವಾ ತುಪ್ಪವನ್ನು ಪಡೆಯಲಿಕ್ಕೆ ಬಿಸಿಮಾಡಿದರೆ ಚೆನ್ನಾಗಿ ಕೆನೆ ಕಟ್ಟಿದ ಮೇಲೆ ಮತ್ತೆ ಸ್ವಲ್ಪ ಹೊತ್ತು ಹಾಲನ್ನು ಉಕ್ಕಿ ಚೆಲ್ಲದ ಹಾಗೆ ಕೆನೆಯ ಪಕ್ಕದಲ್ಲೇ ಜಿಡ್ಡು ಸೇರುವುದನ್ನು ಕಾಣುತ್ತೇವೆ. ಅಂತೆಯೇ ಪರಮಾತ್ಮನ ಇರುವು ಗೊತ್ತಾಗಬೇಕಾದರೆ ನಮ್ಮ ಕಾಯಕ ಜೀವನದಲ್ಲಿ ಸಕ್ರಮವಾದ ಪ್ರಕ್ರಿಯೆಗಳು ಶುದ್ಧಾ ಭಕ್ತಿಗಳು ನಿರಂತರ ನಡೆಯಬೇಕು. ಆಗ ಪರಮಾತ್ಮನ ದರ್ಶನ ಸಾಧ್ಯವಾಗುತ್ತತೆ. ಈ ವಚನದಲ್ಲಿ ಅಣ್ಣನವರು ಶಕ್ತಿ ವಿಶಿಷ್ಟಾದ್ವೈತ ತತ್ವವನ್ನು ಸೂಕ್ಷ್ಮವಾಗಿ ತಿಳಿಸಿರುತ್ತಾರೆ. ಶರೀರದಲ್ಲಿ ಜೀವಾತ್ಮನ ಜೊತೆಯಲ್ಲೇ ಪರಮಾತ್ಮ ಇದ್ದರೂ ಜೀವಾತ್ಮನೇ ಪರಮಾತ್ಮನಲ್ಲ. ಹೇಗೆ ಉದಕದಲ್ಲಿ ಕಿಚ್ಚು ಅಂದರೆ ಬೆಂಕಿ ಇದ್ದರೂ ನೀರೇ ಬೆಂಕಿಯಲ್ಲ ಅಥವಾ ವಿದ್ಯುತ್ ಅಲ್ಲ. ಆದರೆ ನೀರನ್ನು ಬಿಟ್ಟು ವಿದ್ಯುತ್ ಅಲ್ಲ. ಅಂತೆಯೇ ಸಸಿಯೇ ರುಚಿ ಅಲ್ಲ ಕಮಲದ ಗಿಡವೇ ಪರಿಮಳವಲ್ಲ, ಹಾಲಿನ ಕೆನೆಯೇ ಸ್ನೇಹ ಅಂದರೆ ಜಿಡ್ಡಲ್ಲ. ಸ್ಥೂಲವಾಗಿ ನೋಡಿದಾಗ ಉದಕ, ಕಿಚ್ಚು, ಸಸಿ, ರುಚಿ ಹಾಗೂ ಸಸಿ ಪರಿಮಳ ಕನೆ ಮತ್ತು ತುಪ್ಪ ಬೇರೆ ಬೇರೆಯಾಗಿ ಕಂಡರೂ ಸೂಕ್ಷ್ಮವಾಗಿ ನೋಡಿದಾಗ ಎರಡೂ ಬೇರೆ ಅಲ್ಲ, ಎರಡಲ್ಲ. ಒಂದೇ ಒಂದೇ ಎಂದ ಮೇಲೆ ವಿದ್ಯುತ್ ಬೇಕಿದ್ದಾಗ ನೀರನ್ನು ಉಪಯೋಗಿಸುವಂತಿಲ್ಲ, ನೀರೇ ಬೇರೆ, ವಿದ್ಯುತ್ತೇ ಬೇರೆ. ಹಾಗೆಯೇ ನೆನೆ, ಪರಿಮಳ, ಸಸಿ, ರುಚಿ, ಕೆನೆ ಸ್ನೇಹ ಇಲ್ಲಿ ಅದ್ವೈತ ತತ್ವವನ್ನು ಅಣ್ಣನವರು ಎಷ್ಟು ಸರಳವಾಗಿ ಸುಂದರವಾಗಿ ಚಿತ್ರಿಸಿದ್ದಾರೆ, ಜೀವಿಯನ್ನು ಅಂದರೆ ದೇಹಿಯನ್ನು ಉದಕ, ಸಸಿ, ನೆನೆ, ಕೆನೆಗಳಿಗೆ ಹೋಲಿಸುವ ಈ ಉಪಮಾನಗಳ ಉದಾಹರಣೆ ಅರ್ಥಪೂರ್ಣವಾಗಿವೆ. ನೀರಿನಿಂದ ವಿದ್ಯುತ್, ಸಸಿಯಿಂದ ರುಚಿಯಾದ ಹಣ್ಣು, ಹೂವಿನ ಬಳ್ಳಿಯಿಂದ ಪರಿಮಳ ಭರಿತ ಹೂವು, ಕೆನೆಯಿಂದ ಸ್ನೇಹ ಅಥವಾ ಜಿಡ್ಡು ಅಂದರೆ ತುಪ್ಪ ಪಡೆಯಬೇಕಾದರೆ ಅವಿಚ್ಛಿನ್ನವಾದ ಸಕ್ರಮವಾದ ಶ್ರದ್ಧಾ

ಪೂರ್ವಕ ಕಾಯಕ ಮಾಡಲೇ ಬೇಕಲ್ಲವೇ ? ಅಂತಯೇ ಜೀವಾತ್ಮನಲ್ಲಿರುವ ಪರ-ಮಾತ್ಮನ ಅರಿವು ಆಗಬೇಕಾದರೂ ಅವಿಚ್ಛಿನ್ನವಾದ ಶ್ರದ್ಧಾ ಭಕ್ತಿ ಪೂರ್ವಕ ಕಾಯಕ ಅತ್ಯವಶ್ಯಕ ಎನ್ನುವುದನ್ನು ಈ ವಚನದಲ್ಲಿ ಪ್ರತಿಪಾದಿಸಿದ್ದಾರೆ. ಅಣ್ಣನವರ ವಚನದಲ್ಲಿಯ ಉಪಮಾನಗಳು ಮುಮುಕ್ಷುಗಳಿಗೆ ಬೇಕಾದ ಎಲ್ಲಾ ತರಹದ ಉಪ-ದೇಶಗಳನ್ನು ಬಹಳ ಸರಳವಾಗಿ ಸುಂದರವಾಗಿ ಚಿತ್ರಿಸಿ ಮನವರಿಕೆ ಮಾಡಿಕೊಡುತ್ತವೆ.

ಈ ವಚನದಲ್ಲಿರುವ " ಕನ್ಯೆಯ ಸ್ನೇಹ " ಎಂಬುದನ್ನು ನಾನು ಕೆನೆಯ ಸ್ನೇಹ ವೆಂದು ಅರ್ಥೈಸಿದ್ದೇನೆ, ಈ ವಚನದ ಉದಕ, ಸಸಿ, ನೆನೆ, ಪದಗಳು ಒತ್ತಕ್ಷರಗಳಿ ದಿರುವುದನ್ನು ಕಾಣುತ್ತೇವೆ-ಅಂತೆಯೇ ಕನ್ಯೆ ಪದಕ್ಕೆ ಬದಲಾಗಿ ಕೆನೆ ಪದವಿದ್ದರೆ ಉದಕ, ಸಸಿ ನೆನೆ ಕೆನೆ ಪದ ಒಂದೇ ಜಾತಿಯ ಪದಗಳಾಗುತ್ತವೆ. ಉದಕದಲ್ಲಿ ವಿದ್ಯುತ್, ಸಸಿಯಲ್ಲಿ ರುಚಿ, ನೆನೆಯಲ್ಲಿ ಪರಿಮಳ ಎಲ್ಲರಿಗೂ ಸುಲಭವಾಗಿ ಅರ್ಥ ವಾಗುತ್ತದೆ. ಅಂತೆಯೇ ಕೆನೆಯಲ್ಲಿ ಸ್ನೇಹ ಅಥವಾ ಜಿಡ್ಡು ಅಥವಾ ತುಪ್ಪ ಎಲ್ಲರಿಗೂ ಅರ್ಥವಾಗುವಂತೆ ಕೆನೆಯ ಸ್ನೇಹ ಎಲ್ಲರಿಗೂ ಸುಲಭಗ್ರಾಹ್ಯವಾಗುವುದಿಲ್ಲ. ಮೇಲಾಗಿ ಮಾಲೋಪಮೆಗಳನ್ನು ಉದಾಹರಿಸುವಾಗ ಸಜಾತೀಯ ಉಪಮೆಗಳೇ ಸೇರಿರಬೇಕು. ನಿರ್ಜೀವ ಉಪಮಾನ ಸಜೀವ ಉಪಮಾನಗಳು ಮಾಲೋಪಮ ಯಲ್ಲಿ ಒಟ್ಟಿಗೇ ಸೇರಿರಬಾರದು. ಉದಕ ಸಸಿ, ನೆನೆ, ಸಜೀವ, ವಸ್ತುಗಳಲ್ಲ, ಕನ್ಯೆ ಸಜೀವ, ಕನ್ಯೆಗೆ ಬದಲಾಗಿ ಕೆನೆ ಸೇರಿದರೆ ಒಂದು ಜಾತಿಯ ಉಪಮೆಗಳು ಒಂದು ಮಾಲೆಯಲ್ಲಿ ಸೇರಿದಂತಾಗುತ್ತದೆ, ಬಹುಶಃ ಓಲೆಗರಿ ಗ್ರಂಥದಿಂದ ಪ್ರತಿ ಮಾಡುವಾಗ ಮೂಲ " ಕೆನೆ ಪದ ಚೆನ್ನಾಗಿ ಕಾಣದಿರುವ ಸಂದರ್ಭದಲ್ಲಿ ಪ್ರತಿ ಮಾಡಿದವರು ಕೆನೆಗೆ ಬದಲಾಗಿ ಕನ್ಯೆ ಪದ ಬರೆದಿರಲೂ ಬಹುದು. ಮಾಲೋಪ-ಮಾನನಿಯಮಕ್ಕೆ ಸರಿ ಹೋಗುವ, ಎಲ್ಲರಿಗೂ ಚೆನ್ನಾಗಿ ಅರ್ಥವಾಗುವ ಪದ ' ಕನ್ಯೆ 'ಗಿಂತ ' ಕೆನೆ ' ಉತ್ತಮವಾಗಿ ಕಾಣುವುದರಿಂದ ' ಕೆನೆ 'ಯ ಸ್ನೇಹ ' ಎಂದು ಪಾಠಾಂತರವನ್ನಾಗಿಯಾದರೂ ಇಟ್ಟುಕೊಳ್ಳಬಹುದು. ಈ ಭಾವನೆ ಪ್ರಮಾದವಾಗಲಾರದು ಎಂದು ಭಾವಿಸಲಾಗಿದೆ. ಒಂದು ಪಕ್ಷ ಮೂಲದಲ್ಲಿ ಕನ್ಯೆಯ ಪದವೇ ಇದ್ದಿದ್ದರೆ ಸ್ನೇಹಕ್ಕೆ ಬದಲಾಗಿ " ಪ್ರೇಮ " ಅಥವಾ ಪ್ರೀತಿ " ಎನ್ನುವ ಪದಗಳು ಅತ್ಯಂತ ಅರ್ಥಪೂರ್ಣವಾಗಿರುತ್ತಿತ್ತು ಅಲ್ಲವೆ ? "ಆದ್ದರಿಂದ ಕನ್ಯೆ " ಯ ಪದಕ್ಕೆ ಬದಲಾಗಿ " ಕೆನೆ " ಪದ ಔಚಿತ್ಯ ಪೂರ್ಣವಾಗಿ ಪ್ರಕೃತ ಸಂದರ್ಭ ಭಾವನೆಗಳಿಗೆ ಪೂರಕವಾಗುತ್ತದೆ ಎಂದು ತಿಳಿದು ಇಲ್ಲಿ "ಕನ್ಯೆ"ಗೆ ಬದಲಾಗಿ "ಕೆನೆ" ಪದವನ್ನು ಉಪಯೋಗಿಸಲಾಗಿದೆ. ಸಹೃದಯರು ಗ್ರಹಿಸುತ್ತಾರೆಂದು ನಂಬಲಾಗಿದೆ.

ಕೊನೆಯದಾಗಿ ಪಶುವಿನ ಉಪಮಾ ಒಂದನ್ನು ವಿಮರ್ಶಿಸೋಣ. "ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತೆನ್ನ ಭಕ್ತಿ." ಜೀವನವನ್ನು ಎತ್ತಿನ ಜೀವನಕ್ಕೂ ಸಂಸಾರವನ್ನು ಗಾಣಕ್ಕೂ ಹೋಲಿಸಿರುವ ಈ ಉಪಮಾನ ಎಷ್ಟು ಸುಂದರವಾಗಿದೆ. ಎತ್ತನ್ನು ಗಾಣಕ್ಕೆ ಕಟ್ಟಿ ಬೋಧನೆ ಮಾಡಿದರಾಯಿತು. ಸುತ್ತಲಿಕ್ಕೆ ಪ್ರಾರಂಭ. ಗಾಣದ ಎಳ್ಳು ಸವೆದು ಎಣ್ಣೆ ಬಂತೆ, ಎಳ್ಳು ಜೊಳ್ಳೋ ಅಥವಾ ಗಟ್ಟಿಯೋ ? ಮುಂತಾದ ಯಾವ ಪರಿವೆಯೂ ಎತ್ತಿಗಿಲ್ಲವೇ ಇಲ್ಲ. ಯುಕ್ತಾಯುಕ್ತ ವಿವೇಚನೆ ಇಲ್ಲದ ಪರಿಭ್ರಮಣ. ನಮ್ಮ ಸಂಸಾರದ ಜೀವನ ವ್ಯರ್ಥವಾದ ಪರಿಭ್ರಮಣವಾಗ ಬಾರದು. ಅರ್ಥವತ್ತಾದ ಪರಿಭ್ರಮಣವಾಗಬೇಕು. ಹಾಗಿಲ್ಲದಿದ್ದರೆಸಂಸಾರವೆಂಬ ಗಾಣದ ಸುತ್ತಾಟಕ್ಕೆ ವಿರಾಮವೇ ಇಲ್ಲ. ಸಂಸಾರ ಗಾಣದಿಂದ ಜ್ಯೋತಿಯನ್ನು ಬೆಳಗಿಸಿಕೊಳ್ಳಬೇಕು. ಜೀವನವನ್ನು ಸಾರ್ಥಕ್ಯ ಮಾಡಿಕೊಳ್ಳಬೇಕು. ಎನ್ನುವ ಭಾವನೆ ಸುಂದರವಾಗಿ ಉಪದಿಷ್ಟವಾಗಿದೆ, ಅಣ್ಣನವರ ಸುಂದರ ವಚನೋದ್ಯಾನದಲ್ಲಿ ಇಂಥಹ ವಿಭಿನ್ನ ಪರಿಮಳ ಭರಿತ ರಾಶಿ ರಾಶಿಯ ಕುಸುಮಗಳು ತುಂಬಿವೆ. ಇಲ್ಲಿ ಕೇವಲ ಕೆಲವೇ ಕುಸುಮಗಳ ಸೌರಭವನ್ನು ಆಘ್ರಾಣಿಸಲು ಪ್ರಯತ್ನಿಸಲಾಗಿದೆ. ಪ್ರತಿಯೊಂದು ವಚನವೂ ಮುಮುಕ್ಷುಗಳಿಗೆ ದಾರಿದೀಪದಂತಾಗುತ್ತದೆ. ಭಕ್ತಿರಸ ಪಿಪಾಸುಗಳಿಗೆ ಒಂದೊಂದು ವಚನವೂ ಒಂದೊಂದು ಸುಂದರ ನೀರ್ಬುಗ್ಗೆಯಂತೆ ಬಾಯಾರಿಕೆಯನ್ನು ಶಾಶ್ವತವಾಗಿ ಹೋಗಲಾಡಿಸಲು ಸಮರ್ಥವಾಗುತ್ತದೆ.

# ಶರಣ ಸತಿ ಲಿಂಗಪತಿ !

-'ಶಿವಕವಿ' ಸಂಗಮೇಶ ಹೊಸಮನಿ

ನನ್ನ ನಚ್ಚಿನಲ್ಲಿ ಅನುಪಮ ಚೆಲುವ,
ಅಳಿಯಲಾಗದು ತಾಯಿ । ಅನುರಾಗ ನಿಲುವ ||ಪಲ್ಲ||

ಹಗಲಿರುಳು ನನಗಂಟು ಕೈ ತುಂಬ ಕೆಲಸ
ಮನದಾಳದಲಿ ಕುಣಿವನೆಷ್ಟೊಂದು ಸರಸ ।
ಕಣ್ಣಂಚಿನೊಳಗಿವರ ವರರೂಪ ಮಾಲೆ
ಎದೆಯುಕ್ಕಿ ತೂಗುತಿದೆ ನಲ್ಲನುಯ್ಯಾಲೆ ||೧

ಮೈ ಮರೆತು ಕುಳಿತಿರಲು ಹಿಂದೆಯೇ ಇರುವ
ಬಿಡಿರೊಥ ಹುಡುಗಾಟ । ಎದೆ ದುಂಬಿ ನಗುವ
ಸರಳ ಅವಿರಳ ತೇಜ ನಿರಾಳ ಓಜ
ಏಸೊ ಜನುಮದ ಪುಣ್ಯ ದೊರೆತ ಮಹರಾಜ ||೨

ಮುಖ ಸಪ್ಪಗಾಗಿರಲು ಗಲ್ಲ, ತುಟಿ ಹಿಡಿದು
ಸುಖದ ಸುಗ್ಗಿಯ ತರುವ ದಣಿವೆಲ್ಲ ಬರಿದು
ಇವನದೆಂತಹ ಮೋಡಿ ನಾನರಿಯೆನಮ್ಮ ।
ಶಿವಕಳೆಯೇ ಮೈವೆತ್ತು ಉದೆಗಿಳಿಯಿತಮ್ಮ ||೩

ಕೊರತೆಯೆಂಬುದು ಕಾಣೆ ಸಕಲ ಸದ್ಭಾಗ್ಯ
ಉಡುತೊಡುವ ಆಯ್ಕೆಯಲಿ ಅವರದೇ ಯೋಗ್ಯ
ನನ್ನ ಮನಸ್ಸಿನ ಮಿಂಚು ನನ್ನವಗೆ ಗೊತ್ತು
ಮಣಿದ ಮಳೆ ಬಿಲ್ಲಾಗಿ ಸುರಿಸುವನು ಮುತ್ತು ||೪

ಆಗೊಮ್ಮೆ ಈಗೊಮ್ಮೆ ತವರು ಮನೆ ನೆನಪು
ಹಡೆದಮ್ಮ ನಿಲಲೆದುರು ಕಂಬನಿಯ ಮುಡಿಪು
ಹೋಗಿ ಬರುವೆಯಾ ಗಿರಿಜೆ ತಾಯಿ ಬಳಿಗೆನುವ
ನೀವು ಬಂದರೆ ಸರಿಯೆ ಬಿಗಿದಪ್ಪಿಕೊಳ್ಳುವ ||೫

ಹೃದಯ ಹಂದರದಲ್ಲಿ ಬಿರಿದ ಹೂ ಮೊಗ್ಗೆ
ಹುಸಿ ಮುನಿಸಿನಲಿ ನನ್ನ ಅವರ ಲಗ್ಗೆ

ಸೋಗಿಲಿವರೇ ಮುಂದೆ ಸೋಜಿಗದ ಯಾತ್ರೆ
ಆದರಿವರದೆ ಗೆಲುವು ಇದು ಎಂಥ ಮಾತ್ರೆ ||೬||

ಅತ್ತೆಮನೆ ಸೊಸೆಯಾಗಿ ಏಸೋ ದಿನ ಕಳೆದೆ
ವರುವರುಷ ಹೊಸರಾಗ-ರಸವನುಂಡು ನಲಿದೆ
ತಿನಲುಣಲು ಬಾಯಿಲ್ಲ ಕಾಣೆ ಕೊರತೆಯನು
ತುಂಬಿ ತೊಳೆಯುವೆ ಪಾದ ಒಲುವಿನೊರತೆಯನು ||೭||

ದೂರದೀ ದಾರಿಯಲಿ ದಣಿವೆಂಬುದಿಲ್ಲ
ಬೇವು ಬೆಲ್ಲವ ಮಾಡಿ ತಿನಿಸಿದರು ನಲ್ಲ
ನಿಮ್ಮ ತೋಳ್ತೆಕ್ಕೆಯೊಳು ಕಣ್ಮುಚ್ಚಬೇಕು
ನಡೆಸಿಕೊಡುವಿರಾ ಎನಲು ಬಾಯ್ಮುಚ್ಚಿ ಸಾಕು ||೮||

ಏಸು ಜನುಮದ ನಂಟು ನಮ್ಮದಿರಬೇಕು
ಜನುಮ ಜನುಮಕು ಇವರೆ ಪತಿಯಾಗಬೇಕು
ನಡೆಸಿಕೊಡು ಗುರುದೇವ ಕೇಳುವೆನು ವರವ
ಬೇರೇನೂ ನಾ ಬೇಡೆ ನೀಡು ಮಂಗಲವ ||೯||

ಬಾಳಿನೊಲುಮೆಯೇಕವನ ಬರೆ ಭಾವಗೀತೆ
ಬೇರೇನು ಹಾಡುವದು ನನ್ನವಗೆ ಸೋತೆ
ಗುರುದೇವ! ಶಿವದೇವ! ಭಾವಲಿಂಗಯ್ಯ
ಒಡಪಿಟ್ಟು ಹೇಳಲೆ ? ಕೂಡಲ ಸಂಗಯ್ಯ ||೧೦||

## ಅಭಿಮಾನಿಗಳಲ್ಲಿ ಬಿನ್ನಹ

ಸಹೃದಯ ಅಭಿಮಾನಿ ಬಂಧುಗಳೇ, " ಸಿದ್ಧಗಂಗಾ ಮಾಸಪತ್ರಿಕೆ " 23 ವರ್ಷಗಳ ಸಾರ್ಥಕ ಸಾಹಿತ್ಯ ಸೇವೆಯನ್ನು ಸಲ್ಲಿಸಿ ಬರುವ 1989 ರ ಸಂಕ್ರಮಣಕ್ಕೆ 24 ನೇ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಿದೆ. ಇದಕ್ಕೆ ಪ್ರೋತ್ಸಾಹ ನೀಡಿದ ತಮಗೆ ಕೃತಜ್ಞತೆಗಳು. ನೀವೂ ಸದಸ್ಯತ್ವ ಮುಂದುವರೆಸಲೂ ಮತ್ತು ಅಕ್ಕ ಪಕ್ಕದ ಮಿತ್ರರುಗಳು ಸಿದ್ಧಗಂಗಾ ದ ಸದಸ್ಯರಾಗಲು ಪ್ರೋತ್ಸಾಹ ನೀಡಬೇಕೆಂದು ಕಳಕಳಿಯ ಮನವಿ,

— ಪ್ರಕಾಶಕರು.

# ೧ ಕೂಡಲ ಸಂಗಮ

— ಜಿ.ಬಿ. ಲಿಂಗರಾಜು, ಬಿ.ಎ. ಅಧ್ಯಾಪಕ, ಜ್ಯೋತಿಯಲ್ಲಾಪುರ.

ಶಿವ ನೆಲಸಿಹನಿಲ್ಲಿ ಸಂಭ್ರಮದಲ್ಲಿ
ಕೂಡಲ ಸಂಗಮದಲ್ಲಿ
ಶರಣರ ಸಂಗಮದಲ್ಲಿ ।

ಬಕುತರ ಹೃದಯದ ಕರೆಕೇಳಿ
ಶಿವ ಲಿಂಗದ ರೂಪವನು ತಾಳಿ
ದರುಷನ ತೋರಿಹನಿಲ್ಲಿ
ಕೂಡಲ ಸಂಗಮದಲ್ಲಿ ॥

ಶಿವ ಶರಣ ಸಂಗವ ಬಯಸಿ
ಚಿರ ಗಂಗೆಯ ಮಡಿಲಲಿ ನೆಲಸಿ
ಧರೆಗಿಳಿದು ಬಂದಿಹನಿಲ್ಲಿ
ಶರಣರ ಹಂಬಲದಲ್ಲಿ ॥

ಶಿವ ಧರ್ಮದ ವಾಣಿಯೇ ಹೂರಾಶಿ
ಶಿವನಾಮ ಸ್ಮರಣೆಗೆ ಇದುಕಾಶಿ
ಪರಿಮಳ ಚೆಲ್ಲಿಹುದಿಲ್ಲಿ
ಕೂಡಲ ಸಂಗಮದಲ್ಲಿ ॥

ನದಿಯೆರಡರ ಸಂಗಮದಿ ಮಿಂದು
ಸಂದೀಶನ ದರುಶನವನು ಪಡೆದು
ಶಿವ ಲಿಂಗವ ಪೂಜಿಸಿಲ್ಲಿ
ಕೂಡಲ ಸಂಗಮದಲ್ಲಿ ॥

 ## ಸೂಚನೆ 

ವಿಳಾಸ ಬದಲಾದ ಸದಸ್ಯರುಗಳು ತಮ್ಮ ಹೊಸ ವಿಳಾಸವನ್ನು ಚಂದಾ ನಂಬರು ಸಹಿತ ಕಾರ್ಯಾಲಯಕ್ಕೆ ತಿಳಿಸಲು ಕೋರಿದೆ. ಮುಂದಿನ ಸಿದ್ಧಗಂಗಾ ಸಂಚಿಕೆಗಳು ತಮಗೆ ಕ್ರಮವಾಗಿ ತಲುಪಲು ಸಹಕರಿಸಬೇಕೆಂದು ಕೋರಿದೆ.

— ಪ್ರಕಾಶಕರು.

## ೨ ಭಾರತಾಂಬೆಗೆ

ಬೆಳಗ ಬನ್ನಿ ಜ್ಯೋತಿಯೊಂದ ಭಾರತಾಂಬೆಗೆ ।
ಭಾರತಾಂಬೆಗೆ ಜೈ ಕನ್ನಡಾಂಬೆಗೆ ॥
ಕಲಾ ಜ್ಯೋತಿ ಬೆಳಗಿದ ಜನ್ಮಧಾತೆಗೆ
ಶಿಲಾ ಸ್ಫೂರ್ತಿಯೆನಿಸಿದ ಭಾರತಾಂಬೆಗೆ
ಗಂಗೆಯಮುನೆ ಜಲಧಿಯ ಜೀವದಾನಿಗೆ
ತುಂಗ ಭದ್ರೆ ಹರಿಯುವ ಕನ್ನಡಾಂಬೆಗೆ

ಕಾಯಕದ ಕಲಿಗಳ ತಾಯಿನಾಡಿಗೆ
ರಾಮ ಭರತ ಜನಿಸಿದ ವೀರಮಾತೆಗೆ
ಧರ್ಮಜ್ಞಾನ ಹರಿಸಿದ ಕಿರಣಕಾಂತಿಗೆ
ಕರ್ಮಧಾಮುವೆನಿಸಿದ ಭಾರತಾಂಬೆಗೆ ॥

ದಾಸ್ಯತನದ ಡೇಡಿ ಕಡಿದ ತಾಯ್ನಾಡಿಗೆ
ದೇಶ ಪ್ರೇಮ ಹೊನಲ ಹರಿ ತಾಯ್ಮಾಡಿಲಿಗೆ
ಬಸವವಾಣಿ ಮೆರೆದಿದೆ ಕನ್ನಡಾಂಬೆಗೆ
ಮಾತೆ ಭಾರತಾಂಬೆಯ ಕಲೆಯ ಕಾಂತಿಗೆ ॥

ಜಯಪತಾಕೆ ಹಾರಿಸಿ ಕೀರ್ತಿ ಬಾನಿಗೆ
ಭಾರತಾಂಬೆ ನೆಲಸಿದ ಭವ್ಯ ಭೂಮಿಗೆ
ದೇಶ ಸೇವೆ ಗೈಯುವ ಸ್ಫೂರ್ತಿ ನಿಲುವಿಗೆ
ದೇಶ ಭಕ್ತರೆದೆಯ ಹಣತೆ ದಿವ್ಯ ಬಾಳಿಗೆ ॥

# ಆಕರ್ಷಣೀಯ ವ್ಯಕ್ತಿತ್ವ

ಜೆ. ಶಾರದರಾಜಶೇಖರ್.

847. 4 ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು—

ಜೀವನದಲ್ಲಿ ಹಾದು ಹೋಗುವ ವ್ಯಕ್ತಿಗಳು ಅನೇಕರು. ಅನೇಕರನ್ ನೋಡುತ್ತೇವೆ. ಮಾತನಾಡುತ್ತೇವೆ, ವ್ಯವಹರಿಸುತ್ತೇವೆ, ಆದರೆ ನೆನಪಿನ ಉಗ್ರಾ ದಲ್ಲಿ ಉಳಿಯುವ ವ್ಯಕ್ತಿಗಳು ಮಾತ್ರ ಕೆಲವರು, ಹಲವರು ತಮ್ಮ ವ್ಯಕ್ತಿತ್ವ ಪ್ರಭಾವದಿಂದ ನಮ್ಮ ಮನಸ್ಸಿನ ಮೇಲೆ ಗಾಢವಾದ ಪ್ರಭಾವವನ್ನು ಬೀರಿ ಅ ವ್ಯಕ್ತಿತ್ವದ ಮುದ್ರೆಯನ್ನೊತ್ತಿರುತ್ತಾರೆ, ಇಂತಹ ಗಾಢವಾದ ಪ್ರಭಾವವನ್ನು ಎಲ್ಲರ ಬೀರಲು ಅಸಾಧ್ಯ, ಕೇವಲ ಕೆಲವೇ ವ್ಯಕ್ತಿಗಳು ಮಾತ್ರ ಇಂತಹ ಪ್ರಭಾವವನ ಬೀರಬಲ್ಲವರಾಗಿರುತ್ತಾರೆ, ಅಂತಹ ವ್ಯಕ್ತಿಗಳನ್ನು ಕಂಡೊಡನೆಯೇ ಏನೋ ಒಂ ವಿಧಧ ಆತ್ಮೀಯತೆ ಮೂಡಿಬರುತ್ತದೆ, ಅಂತಹವರೊಡನೆ ಹೆಚ್ಚು ಹೊತ್ತು ಬೆರೆ ಮಾತನಾಡುವ ತವಕವೂ ಉಂಟಾಗುತ್ತದೆ, ಅವರ ನೆನಪಂತೂ ಸದಾ ಹಚ್ಚಹ ರಾಗಿ ಮನದಲ್ಲಿ ನೆಲೆಯೂರಿ ಬೇರು ಬಿಡುವ ಸಂಭವಗಳೂ ಉಂಟು, ಉನ್ ವ್ಯಕ್ತಿತ್ವವುಳ್ಳವರಿಗೆ ಮಾರುಹೋಗುವವರು, ಎಷ್ಟೋಮಂದಿ. ಇಂತಹ ವ್ಯಕ್ತಿಗ ಅತ್ಯಂತ ಪ್ರತಿಭಾವಂತರು ಹಾಗೂ ಪ್ರಭಾವ ಶಾಲಿಗಳೂ ಆಗಿರುತ್ತಾರೆ, ಅವ ತಮ್ಮ ಚಲನವಲನ ಮಾತಿನ ರೀತಿಯಿಂದ ಎಂಥಹವರನ್ನಾದರೂ ತಮ್ಮೆಡೆಗೆ ಆ ರ್ಷಿಸುವ ವ್ಯಕ್ತಿತ್ವವನ್ನು ಪಡೆದಿರುತ್ತಾರೆ, ಅವರು ಸೂಜಿಗಲ್ಲಿದ್ದಂತೆ.

ಭವ್ಯವ್ಯಕ್ತಿತ್ವ ಮಾನವನಿಗೆ ಒಂದು ವರದಾನವಿದ್ದಂತೆ, ಉದಾತ್ತಧ್ಯೇ ಉಳ್ಳ ವ್ಯಕ್ತಿಯ ವ್ಯಕ್ತಿತ್ವಸಾಮಾನ್ಯವಾಗಿ ಉದಾತ್ತವಾಗೇ ಇರುತ್ತದೆ.

ಜನರ ವ್ಯಕ್ತಿತ್ವದ ಸಾತ್ವಿಕ ಸ್ವರೂಪವೇ ಮಾನವ ಕುಲದ ಕಲ್ಯಾಣ ದೊಡ್ಡರಕ್ಷೆ, ಕರ್ಕಷಸ್ವರೂಪವನ್ನು ಮುಟ್ಟಿರುವ ಹಿಂಸಾ ಪ್ರವೃತ್ತಿಗೆ ತಡೆಯೊಡ್ಡ ಅದೊಂದೇ ದಿವ್ಯಾಸ್ತ್ರ, ಪ್ರಾಚೀನ ಭಾರತದ ತತ್ವಚಿಂತಕರನೇಕರು, ವ್ಯಕ್ತಿಗ ಪ್ರಧಾನವಾಗಿ ಕಾಣುವ ಗುಣಗಳನ್ನನುಸರಿಸಿ ಸಾತ್ವಿಕ, ರಾಜಸಿಕ, ತಾಮಸಿಕ, ಎಂ ಮೂರು ರೀತಿಯ ವ್ಯಕ್ತಿತ್ವವನ್ನು ಗುರುತಿಸುತ್ತಿದ್ದರು.

ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಅನುವಂಶೀಯ ಸಂಪತ್ತಿನಂತೆ ಸನ್ನಿವೇ ಸ್ವರೂಪವೂ ಪ್ರಭಾವ ಬೀರುತ್ತದೆ,

ಸಿದ್ಧಗಂ

ವ್ಯಕ್ತಿತ್ವವನ್ನು ರೂಪಿಸತಕ್ಕ ಅಂಶಗಳೆಲ್ಲ ಮೂಲತಃ ವಂಶಗತವಾಗಿ ಬರತಕ್ಕವೇ ಆದರೂ ಅವನ್ನು ಕ್ರಮವಾಗಿ ವ್ಯವಸ್ಥೆಗೊಳಿಸುವ ಕಾರ್ಯ ಜೀವನದಲ್ಲಿ ಸಿದ್ಧಿಸಬೇಕು. ಅಷ್ಟಾಗಿ ಜನ್ಮತಃ ಉತ್ತಮ ಅನುವಂಶೀಯ ವ್ಯಕ್ತಿರೇಖೆಗಳಿಲ್ಲದಿದ್ದರೂ ಇರುವಷ್ಟನ್ನೇ ಆದಷ್ಟು ಉಪಯುಕ್ತ ರೀತಿಯಲ್ಲಿ ಪೋಷಿಸಿವ್ಯವಸ್ಥೆಗೊಳಿಸಿ ಕೊಂಡರೆ ನಿಸರ್ಗ ದತ್ತವಾಗಿ ಬಂದದ್ದನ್ನು ಬಂಗಾರ ಮಾಡಿಕೊಂಡ ಹಾಗಾಗುತ್ತದೆ,

ಎಲ್ಲ ಕಾಲಕ್ಕೂ. ಎಲ್ಲ ದೇಶಕ್ಕೂ. ಎಲ್ಲ ಸಮಾಜ ಸಂಸ್ಕೃತಿಗಳಿಗೂ ಒಪ್ಪುವ ಮೌಲ್ಯಗಳನ್ನೂ ಆದರ್ಶಗಳನ್ನೂ ಸಾಧಿಸುವುದೇ ವ್ಯಕ್ತಿತ್ವದ ಅಂತಿಮಗುರಿ. ಅದನ್ನೇ ನಾವು 'ಸತ್ಯ ಸುಂದರಂ ಶಿವಂ' ಎಂಬ ಮಾತಿನಲ್ಲಿ ಉನ್ನತ ಆದರ್ಶ ವನ್ನಾಗಿ ಚಿತ್ರಿಸಿಕೊಳ್ಳುವುದು,

ಸೂಕ್ತ ವ್ಯಕ್ತಿತ್ವನ ನಿರೂಪಣೆಯಿಂದ ವ್ಯಯಕ್ತಿಕ ಜೀವನದ ಕಷ್ಟಗಳು ಕಳೆಯು ವುದರ ಜತೆಗೆ ಸಮಾಜದ ಸುಖ ಶಾಂತಿಗೂ ನೆಮ್ಮದಿಗೂ ಅವಕಾಶವಾಗುವುದು' ನಾಯಕರಾಗಲಿ, ಹಿಂಬಾಲಕರಾಗಲಿ, ವಿಹಿತವಲ್ಲದ ವ್ಯಕ್ತಿತ್ವ ಪಡೆದಿರುವುದಾರೆ ಮಾನವ ಸಮಾಜಕ್ಕೆಯಾವಗಳಿಗೆಯಲ್ಲಾದರೂ ವಿಪತ್ತೊದಗಬಹುದು.

ಒಬ್ಬನಾಯಕನ ಸಹನೆಯೇ ಮೊದಲಾದ ಸಾತ್ವಿಕಗುಣ ಜನಾಂಗವೊಂದರ ಧಾರುಣ ಹೋಮವನ್ನು ನಿವಾರಿಸ ಬಹುದು ಹಾಗೆಯೇ, ವಿಚಾರ ಶೀಲ ಹಿಂಬಾ ಲಕರ ವ್ಯಕ್ತಿತ್ವ ನಾಯಕನೊಬ್ಬನು ಅನೇಸರಿಸುವ ನಕ್ರಮಾರ್ಗವನ್ನು ತಪ್ಪಿಸ ಬಹುದು, ವ್ಯಕ್ತಿತ್ವ ತಮಗೂ ಮತ್ತು ಸಮಾಜಕ್ಕೂ ಹಿತವಾಗುವಂತಿರ ಬೇಕು. ಸಮಾಜ ಜೀವನದಲ್ಲಿ ತೀವ್ರಗತಿಯಲ್ಲಿ ಕಾಣಿಸಿ ಕೊಳ್ಳುತ್ತಿರುವ ಬದಲಾವಣೆಗೆ ಹೊಂದಿಕೊಂಡು ಹೋಗುನ ಶಕ್ತಿ ವ್ಯಕ್ತಿಯ ಉಳಿವಿಗೆ ಬಹುಅಗತ್ಯ.

ವ್ಯಕ್ತಿತ್ವದಲ್ಲಿ ಅತಿಮುಖ್ಯವಾದುದೆಂದರೆ 'ಆಕರ್ಷಣೀಯ ವ್ಯಕ್ತಿತ್ವ"

ವ್ಯಕ್ತಿತ್ವವು ನರವ್ಯೂಹ' ಸಂವೇದನೆಗಳು, ಪ್ರತಿಭೆ, ಕಲಿವು, ಪ್ರೇರಕಶಕ್ತಿ, ಜ್ಞಾಪಕಶಕ್ತಿ, ಇತ್ಯಾದಿ ಅಂಶಗಳೆಲ್ಲಾ ಸೇರಿದ್ದರೂಪಹ, ಆ ಯಾವ ಒಂದು ಅಂಶದ ಪ್ರತ್ಯೇಕ ಸ್ವರೂಪವೂ ಅದರಲ್ಲಿ ಕಾಣುವಂತಿಲ್ಲ, ಅವುಗಳೆಲ್ಲಾ ಸಹಕರಿಸಿ ಹೊಸ ರೂಪದಲ್ಲಿ ಮೂಡುವ ಕಾರ್ಯ ಸ್ವರೂಪವನ್ನು ಕಾಣುತ್ತೇವೆ: ನೀವು ಧರಿಸುವ ಉಡು ಪು, ನಿಮ್ಮ ಮುಖದಲ್ಲಿನ ಭಾವನೆಗಳು, ನೀವು ಮಾತಾಡುವ ರೀತಿ. ನೀವು ಯೋಚಿ ಸುವ ರೀತಿ, ಆ ಯೋಜನಾಲಹರಿಯಿಂದ ನೀವು ಬೆಳಸಿಕೊಂಡಿರುವ ರೀತಿನೀತಿಗಳು ಎಲ್ಲವೂಸೇರಿ ವ್ಯಕ್ತಿತ್ವ ಎನಿಸಿಕೊಳ್ಳುತ್ತದೆ.

ಮೊದಲ ನೋಟಕ್ಕೆ ನೀವು ಪ್ರಭಾವ ಬೀರ ಬೇಕಾದರೆ ನಿಮ್ಮ ಉಡುಪು ಸಹ ಸಾಕಷ್ಟು ಪ್ರಭಾವವನ್ನು ಬೀರುತ್ತದೆ, ನೀವು ನಮಸ್ಕರಿಸುವ ರೀತಿ ಕೈಕುಲುಕುವ ರೀತಿಯೂ ಸಹ. ನಿಮ್ಮ ವ್ಯಕ್ತಿತ್ವಕ್ಕೆ ಪ್ರಭಾವಬೀರುವ ಅಂಶಗಳು ಇವುಗಳನ್ನೆಲ್ಲಾ ನಾವು ಸ್ವಯಂ ಬೆಳೆಸಿ ಕೊಳ್ಳಬೇಕು.

ಇಷ್ಟೇ ಇದ್ದರೆ ಸಾಲದು. ನಾವು ಇತರರನ್ನು ಮೊದಲ ಬಾರಿಗೆ ಪರಿಚಯ ಮಾಡಿಕೊಂಡು ನಮ್ಮ ವ್ಯಕ್ತಿತ್ವದ ಪ್ರಭಾವ ಅದರ ಮೇಲೆ ಬೀರುವಂತಾಗ ಬೇಕಾದರೆ ನಮ್ಮ ಕಣ್ಣುಗಳೇ ಆತ್ಮೀಯತೆಯನ್ನು ಸೂಸುವಂತಿರಬೇಕು. ನಿಮ್ಮ ಕಣ್ಣುಗಳ ಮೂಲಕ ಇತರರು ನಿಮ್ಮ ಹೃದಯವನ್ನು ನೋಡುತ್ತಿರುತ್ತಾರೆ ಎಂಬ ಅಂಶವನ್ನು ಮರೆಯಬೇಡಿ. ನಿಮ್ಮ ಹೃದಯದ ಒಳಗುಟ್ಟನ್ನು ನಿಮ್ಮ ಕಣ್ಣುಗಳು ಪ್ರತಿಬಿಂಬಿಸಬಲ್ಲವು.

ನಿಮ್ಮ ವ್ಯಕ್ತಿತ್ವ ಪ್ರಭಾವ ಬೀರ ಬೇಕಾದರೆ ಒಂದು ಮುಗಳ್ನಗೆ ಹೆಚ್ಚಿನ ಪ್ರಭಾವವನ್ನು ಬೀರುತ್ತದೆ,

ಮೊದಲನೋಟದಲ್ಲಿಯೇ ನೀವು ಮುಖದಲ್ಲಿ ಗಡಸುತನವನ್ನು ಪ್ರದರ್ಶಿಸಬೇಡಿ. ಇದರಿಂದ ನೀವೆಷ್ಟೇ ಪ್ರಭಾವ ಶಾಲಿಗಳಾಗಿದ್ದರೂ ಸಹ ನಿಮ್ಮ ವ್ಯಕ್ತಿತ್ವಕ್ಕೆ ಮಸಿ ಬಳಿಯುವ ಕೆಲಸ ಮಾಡುತ್ತದೆ ನೀವು ಮುಗುಳ್ನಕ್ಕೆ ಆಹ್ವಾನಿಸಿದರೆ ಬಂದವರೂ ಸಹ ಮುಖದಲ್ಲಿ ಮುಗುಳ್ನಗೆ ವ್ಯಕ್ತಪಡಿಸುತ್ತಾರೆ, ಹೃದಯ ತುಂಬಿ ನಮಸ್ಕರಿಸಿ. ಕೈಮಾತ್ರ ನಮಸ್ಕಾರವನ್ನು ಸೂಚಿಸಿದರೆ ಸಾಲದು ಹೃದಯವೂ ಆಭಾರಿ ಎನ್ನುವ ಭಾವಬರುವಂತಿರಬೇಕು,

ಜೀವನದಲ್ಲಿ ಬಾಳ್ವೆಯೂ ಒಂದು ಕಲೆ. ಅದರಲ್ಲಿ ವ್ಯಕ್ತಿತ್ವ ರೂಪಿಸಿಕೊಳ್ಳುವುದು ಜೀವನ ಕಲೆಗೆ ಮಕುಟಮಣಿ ಇದ್ದಂತೆ 'Pleasing personality' ಅಂದರೆ ವಿನಯ ಪೂರ್ವಕ ವ್ಯಕ್ತಿತ್ವ ರೂಢಿಸಿಕೊಂಡರೆ ನೀವು ಯಾವ ಕ್ಷೇತ್ರದಲ್ಲಿದ್ದರೂ ಸಹ ಮುನ್ನಡೆಯಲ್ಲಿ ತುಂಬಾ ಸಹಕಾರಿಯಾಗುತ್ತದೆ,

---

## ❁ ಸಹೃದಯ ಓದುಗರಲ್ಲಿ ವಿನಮ್ರ ಕೋರಿಕೆ ❁

ತಾವು **ಸಿದ್ಧಗಂಗಾ** ಪತ್ರಿಕೆಗೆ ಸದಸ್ಯರಾಗಿ ಸಹಕಾರ ನೀಡಿರುತ್ತೀರಿ. ಇದಕ್ಕಾಗಿ ಕೃತಜ್ಞತೆಗಳು. ಡಿಸೆಂಬರ್ ತಿಂಗಳಿಗೆ ತಮ್ಮ ಸದಸ್ಯತ್ವ ಮುಗಿಯುತ್ತದೆ. ತಾವು ಎಂದಿನಂತೆ 1989ನೇ ಸಾಲಿಗೂ ತಮ್ಮ ಚಂದಾ ಹಣ 20=00 ರೂಗಳನ್ನು ಕಳುಹಿಸಿ ಸದಸ್ಯತ್ವವನ್ನು ಮುಂದುವರಿಸಲು ಪ್ರಾರ್ಥನೆ.

**ಪ್ರಕಾಶಕರು.**

# ದುರ್ಗಾ ಸ್ತವನ (ಅನ್ಯತ ಗೀತೆ)

" ಕನ್ನಡ ಕವಿ ಕಾಳಿದಾಸ " ಶ್ರೀ ಮೋಟಗಿ ಮಲ್ಲಿಕಾರ್ಜುನ, ಅಥಣಿ.

ಓಂ ಭಗವತಿ ಮಹಾಶಕ್ತಿದಾಯಿನಿ ಮುಕ್ತಿದಾಯಿನಿ ವಿಶ್ವಜನನಿ ಶಾಂತಿದಾತೆ
ಶಾಂಭವಿ ಕಾತ್ಯಾಯನಿ ಮಹಾಕಾಲಿಮಾತೆ ಪಾರ್ವತಿ ಮಾಹೇಶ್ವರಿ ನಮೋಸ್ತುತೆ॥

ಶಂಭುಪತಿ ಶರ್ವಾಣಿ ದುರ್ಗಾ ರುದ್ರಭಯಂಕರೀ ನೀಲಾಂಬರೀ ಶುಭಂಕರೀ
ಅಂಬಿಕೆ ದೇವಿ ಮಹಾಲಕ್ಷ್ಮಿ-ಶಾರದೆ ಗೌರಿ ಸಕಳ ನೀನೆ ಕರುಣಾಸಾಗರೀ
ಅಂಭುಜಾಕ್ಷಿ ಜಗದಂಬೆ ಕಂಠ ಮೌಕ್ತಿಕಾಭರಣ ಪಾದಪದ್ಮರಂಜಿತೆ ಶೌರೀ
ದಂಭ ದರ್ಪ ದೈತ್ಯ ಸಂಹಾರಿಣೀ ಸಿಂಹವಾಹನಳೆನೆ ಶೋಭಿಸೆ ಅಭಯಂಕರೀ ॥೧॥

ದಿವ್ಯಶಕ್ತಿ ಸೌಭದ್ರೆ ರತ್ನಕಂಕಣ ಕರರುಂಡಮಾಲಾ ತ್ರಿಶೂಲ ಧಾರಿಣೀ
ನವ್ಯಕಲಾ ಚೈತನ್ಯ ವಾಹಿನೀ ನವಕೋಟಿ ರೂಪ ದೇಹ ಪ್ರಕಾಶಿನೀ
ಸೇವ್ಯೈಭಾವ ಭಕ್ತಿ ಮುಕ್ತಿದಾತೆ ಚಿಚ್ಛಕ್ತಿ ನೀ ಸುರಾಸುರ ವಂದಿನೀ
ಭವ್ಯ ಕಾಂತಿಕಿರಣ ಕೋಟಿರವಿ ತೇಜಸ್ತೇಜಿ ನೀ ಸರ್ವಲೋಕ ಪೂಜಿನೀ॥೨॥

ಅಷ್ಟಭುಜಾದೇವಿ ಸಹಸ್ರ ಮುಖಾಬ್ಜ ರಕ್ತಘೂರ್ಣಿತ ಭಯಂಕರ ನೇತ್ರೆ
ಶಿಷ್ಟಜನ ರಕ್ಷಿಣಿ ಮಹಾತಾಯಿ ಅಸಂಖ್ಯಾಕರ ಶುಭ ಚರಿತೆ ನೀ ಮಂಗಳಗಾತ್ರೆ
ದೃಷ್ಟಿ ದಿವ್ಯಜ್ಞಾನ ದೇಹಿ ಪರಾಶಕ್ತಿ ಅನ್ನಪೂರ್ಣೆ ಖಡ್ಗ ಪಾಣಿ ಅಮೃತಕಲಶರಾಜಿತೆ
ಸೃಷ್ಟಿಸಕಳ ವೃಷ್ಟಿಗಂಗೆ ಜೀವರಾಶಿ ಅನಂತಯುಗ ಕಾಲಚಕ್ರ ಪ್ರಲಯಕರ್ತೆಪ್ರವ
ಪೆಯಲ್ತೆ ?

ವಸುಧೆಯೊಳ್ ರಕ್ತಧಾರೆ ಅಶ್ರುಧಾರೆ ಸುರಿದು ಪವಿತ್ರತನುವನಿತ್ತು ಸುತರುಸಾ
ಸುಶಾಂತಿ ನೀಡಿ ಸುಭಗಗೊಳಿಸು ಜನನಿ ಮೃತ್ಯುಹರೆ ಪಾಪಹಾರಿಣಿ ಪ್ರಲಯಂಕರಿ
ಮುಪಣಗೊಳಿಸು ಭ್ರಷ್ಟಬಾಳು ಜಗದಿ ಹರಿಸು ನೀ ಅಮೃತಗಂಗೆ ವಿಶ್ವಂಭರಿ
ಶಶಿಮೌಳಿರಾಣಿ ಮಣಿದು ಕೇಳ್ವ"ಕನ್ನಡಕವಿಕಾಳಿದಾಸ"ಕರುಣಿಸೌತಾಯೆ ಶಾಂಕ

ಶಿವ್ಪಗ

## ದೇವನಿರುವ ಪರಿ (ಮಧುರಚೆನ್ನ)

ದೇಹದಲ್ಲಿ ಜೀವವಿರುವ ರೀತಿಯಲ್ಲಿ ಜಗವಲ್ಲಿ ದೇವನಿರಬಹುದು. ದೇಹವನ್ನು ಎಷ್ಟು ಹಿಂಜಿ ನೋಡಿದರೂ ಯಾವ ಸೂಕ್ಷ್ಮಯಂತ್ರಕ್ಕೂ ಕೂಡ ಜೀವವು ಕಾಣುವಂತಿಲ್ಲ; ಸಿಕ್ಕುವಂತಿಲ್ಲ. ಆದರೂ ಅದು ಇದ್ದದ್ದು ಸತ್ಯ. ಹಾಗೆಯೇ ಈ ಅನಂತ ವಿಶ್ವದಲ್ಲಿ ನಾವು ವಿಸುದನ ರೆಕ್ಕೆ ಕಟ್ಟಿಕೊಂಡು ಹಾರಿದರೂ ಅಪಾರವಾದ ಪೊಳ್ಳು ಮುಗಿಲಲ್ಲಿ ಅಸಂಖ್ಯ ಗ್ರಹನಕ್ಷತ್ರಾದಿಗಳನ್ನು ಬಿಟ್ಟು ಇನ್ನೇನೂ ನೋಡುವುದಕ್ಕೆ ಸಾಧ್ಯವಿಲ್ಲವಾದರೂ "ಜಡ (ಸಚಲ" ವಿಶ್ವದ ಜೀವವೊಂದು ಇಲ್ಲದಿರಲಿಕ್ಕಿಲ್ಲ. ನನ್ನ ದೇಹದಲ್ಲಿ ಇದ್ದೇ ಇರುವ ಜೀವ (ಆತ್ಮ) ವನ್ನು ನೋಡುವುದಕ್ಕೆ ಸಮರ್ಥವಾದ ಕಣ್ಣಿಗೆ ವಿಶ್ವಾಂತರ್ಯಾಮಿಯನ್ನು ನೋಡುವ ಸಾಮರ್ಥ್ಯವೂ ಇಲ್ಲದಿರಲಿಕ್ಕಿಲ್ಲ.

ಇಷ್ಟು ದಿನ ಒಳಗೆ ಜೀವಕ್ಕೆ ಮಾತ್ರ ಯಾಕೋ ದೇವನಿದ್ದಾನೆಂದು ಅನಿಸುತ್ತಿತ್ತು. ಆದರೆ ಇಂದು ಅದಕ್ಕೆ ಒಂದು ಯುಕ್ತಿಯ ಬೆಂಬಲವು ಸಿಕ್ಕಂತಾಯಿತು.

---

## ಬ್ರಹ್ಮಚರ್ಯ

ಬ್ರಹ್ಮಚರ್ಯವೆಂದರೆ ಕಾಯಾ, ವಾಚಾ, ಮನಸಾ ವಿಷಯ ವಾಸನೆಯಿಂದ ನಿರ್ಲಿಪ್ತರಾಗಿ ಪರಿಶುದ್ಧರಾಗಿರುವುದು. ಅಂದರೆ ಲೈಂಗಿಕೇಚ್ಛೆ ಅಂತಹ ಪ್ರೇರೇಪಣೆ ಮತ್ತು ಇಂದ್ರಿಯಾಕರ್ಷಣೆ-ಇವುಗಳಿಂದ ನಿರ್ಲಿಪ್ತವಾಗಿರುವುದು. ಇದು ಲಿಂಗ ಶಕ್ತಿಯ ಘನತೆಯನ್ನು ಕಾಪಾಡಿಕೊಳ್ಳುವುದು. ಲಿಂಗಶಕ್ತಿಯ ಬಿಗಿ ಹಿಡಿತ ಅಥವಾ ಅಣಗಿಸುವಿಕೆ ಇವ್ಯಾವುವೂ ಬ್ರಹ್ಮಚರ್ಯ ಅಭ್ಯಾಸದಲ್ಲಿ ಸಹಾಯ ಮಾಡಲಾರವು ಬ್ರಹ್ಮಚರ್ಯ ಎಂಬುದು ತಪಸ್ಸು ಅಥವಾ ಯೋಗದ ಹೃದಯಾಂತರಾಳದಲ್ಲಿರುವುದು. ಕಾಮೋದ್ರೇಕದ ನೋಟವು ಬ್ರಹ್ಮಚರ್ಯೆಯನ್ನು ಮುರಿದು ಹಾಕುವುದು. ನಿಮ್ಮ ಮಡದಿ ಮತ್ತು ಇತರ ಎಲ್ಲಾ ಸ್ತ್ರೀಯರೂ ನಿಮ್ಮ ತಾಯಿ ಅಥವಾ ದುರ್ಗಾಮಾತೆಯ ಸ್ವರೂಪಿಗಳೆಂದು ಭಾವಿಸಿರಿ. ಜಪ, ಕೀರ್ತನೆ, ಪ್ರಾರ್ಥನೆ, ಧ್ಯಾನ ಸಾತ್ವಿಕಆಹಾರ, ವಿಚಾರ, ಪ್ರಾಣಾಯಾಮ, ಶೀರ್ಷಾಸನ, ಸರ್ವಾಂಗಾಸನ ಇವೆಲ್ಲವೂ ನಿಮಗೆ ಬ್ರಹ್ಮಚರ್ಯೆಯಲ್ಲಿ ಯಶಸ್ಸುಗಳಿಸಲು ಸಹಾಯ ಮಾಡುತ್ತವೆ. ಬ್ರಹ್ಮಚರ್ಯೆಯ ಸಹಾಯವಿಲ್ಲದೆ ಆಧ್ಯಾತ್ಮಿಕ ಮುನ್ನಡೆಯು ದೊರಕಲಾರದು. ನೀವು ಬ್ರಹ್ಮಚರ್ಯದಲ್ಲಿ ನಿರತರಾಗಿದ್ದರೆ ನಿಮಗೆ ಅದ್ಭುತ ದೇಹ ಶಕ್ತಿಯೂ, ಅಪಾರ ಆತ್ಮಶಕ್ತಿ ಯೋಗ ಲಭಿಸುವುದು. ನೀವು ಈ ವಿಶ್ವವನ್ನೇ ಅಲ್ಲಾಡಿಸಬಲ್ಲಿರಿ.

– ಸಂಗ್ರಹ ಎಂ. ರೇಣುಕಾರಾಧ್ಯ.

# ದಾನ ಹಾಗೂ ಹಿಂದೂ ಧರ್ಮ

–ಸೌ. ಮಹಾದೇವಿ ಮುರಗೆಪ್ಪ ಅಳ್ಳಗಿ ಮಾರಕಬ್ಬಿನಹಳ್ಳಿ.

ಕನ್ನಡದ ಪ್ರಸಿದ್ಧ ಕವಿ 'ಸೋಮೇಶ್ವರ'ನು ''ಸತ್ಪಾತ್ರದೋಳ್ ದಾನಮಂ'' ಕೊಡು ಎಂದು ಹೇಳಿದ್ದಾನೆ. ಈ ಮಾತಿನ ಕಡೆ ಎಲ್ಲರೂ ದುರ್ಲಕ್ಷ್ಯ ಮಾಡಿದ್ದಾರೆ. ದಾನಮಾಡುವದೊಂದು ಪುಣ್ಯಕಮ . ಇಂತಿಂತಹ ದಾನ ಮಾಡಿದವರು ಇಂತಿಂತಹ ಪದವಿಗೇರಿದರು. ಪುನರ್ಜನ್ಮದಲ್ಲಿ ರಾಜ ಮಹಾರಾಜರ ಹೊಟ್ಟೆಯಿಂದ ಹುಟ್ಟಿದರು. ಎಂದು ಮಠ-ಮಂದಿರಗಳಲ್ಲಿ ಹೇಳುವ ಪುರಾಣ-ಕೀರ್ತನೆಗಳನ್ನು ಕೇಳಿ ಮೂಢ ಭಕ್ತಿಯ ಭಾವಿಕಜನ ತಾವು ದಾನಮಾಡಿ ಪುಣ್ಯ ಗೊಳಿಸಬೇಕೆಂಬ ಭಾವನೆಯಿಂದ ಎಂಥವರಿಗೊ ಧಾರಾಳ ಮನಸ್ಸಿನಿಂದ ದಾನ ಮಾಡುತ್ತಾರೆ.

ಈ ಮೂಢ ಭಾವನೆಯಿಂದಲೇ ಭಾರತ ಅಧೋಗತಿಗಿಳಿದಿದೆ. ಮೈಗಳ್ಳರಿಗೆ, ಮೋಸಗಾರರಿಗೆ ದಾನವೊಂದು ಅಕ್ಷಯ ಪಾತ್ರೆಯಾಗಿ ಪರಿಣಮಿಸಿದೆ. " ಬೇಡಿ ಉಂಡವನ ಬಾಯಿ ನಾಡೆಲ್ಲ ಕಂಡಿತು " ಎಂಬಗಾದೆ ಇಂಥವರನ್ನು ಕಂಡೇ ಹುಟ್ಟಿರಬೇಕು.

ದಾನ ಬೇಡುವ ಈ ಮೋಸಗಾರರಲ್ಲಿ ಮೂರುವರ್ಗ ಮಾಡಬಹುದು. ದಿನವೂ ಬಿಕ್ಷೆಬೇಡಿ ಹೊಟ್ಟೆ ತುಂಬಿಕೊಳ್ಳುವ ಬಿಕ್ಷುಕ ಜನಸಂಘ-ಸಂಸ್ಥೆ, ಗುಡಿ – ಗುಂಡಾರ, ಬೋರ್ಡಿಂಗಗಳ ಹೆಸರಿನಿಂದ ದಾನ ಎತ್ತುವ ಪುಢಾರಿ ಜನನೆರೆಹಾವಳಿ, ಬಿರುಗಾಳಿ, ಭೂಕಂಪ ಮುಂತಾದುವುಗಳಿಗೆ ತುತ್ತಾಗಿ ಬಳಲುವ ದುರ್ದೈವೀ ಜನರ ಸಹಾಯಕ್ಕೆಂದು ನಿಧಿ ಎತ್ತುವ ಅತಿದೊಡ್ಡ ಪುಢಾರಿ ಜನ-ಇವರಲ್ಲಿ ನೂರಕ್ಕೆ ೯೦ರಷ್ಟು ಜನ ಮೋಸಗಾರರೇ ದಾನ-ನಿಧಿಯ ಹೆಸರಿನಲ್ಲಿ ಎತ್ತಿದ ಹಣ ತಮ್ಮ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡ ಅನೇಕ ಉದಾಹರಣೆಗಳನ್ನು ಕಂಡಿದ್ದೇವೆ. ಸ್ವತಂತ್ರ ಭಾರತದಲ್ಲಂತೂ ಇದೊಂದು ಸಂಭಾವಿತ ಉದ್ಯೋಗವಾಗಿದೆ. ಹೊಟ್ಟೆ ಹೊರ ಕೊಳ್ಳುವ ಸಾಧನವಾಗಿದೆ.

ದಿನವೂ ಬಿಕ್ಷೆಬೇಡಿ ಹೊಟ್ಟೆ ತುಂಬಿಸಿಕೊಳ್ಳುವ ಈ ಬಿಕ್ಷುಕರಲ್ಲಿ ಬಹು ಸಂಖ್ಯಾಕರು ವ್ಯಸನಿಗಳು ಸೊಕ್ಕಿನವರು, ಬಿಕ್ಷೆಕೊಟ್ಟರೆ ಸರಿ ಇಲ್ಲವಾದರೆ ಬೈಯುತ್ತ ಹೋಗುವರು. ಎಲ್ಲರೂ ಕಂಡುಂಡ ಅನುಭವ.

ಗುಡಿ-ಗುಂಡಾರ- ಮಠ-ಮಂದಿರ, ಹೋರ್ಡಿಂಗು ಮುಂತಾದವುಗಳ ಹೆಸರಿನಿಂದ ದಾನ ಬೇಡುವ ಈಪುಢಾರಿ ವರ್ಗ, ಇವರು ಬೇಡಿದಾಗ ಕೊಟ್ಟರೆ ಒಳಿತು. ಕೊಡದಿದ್ದರೆ ತೀರಿತು' ಯಾವ ಪರಿಯಿಂದಲಾದರೂ ಅವರ ಹಾನಿ ಮಾಡಿದಾಗೇ ಇವರಿಗೆ ಸಮಾಧಾನ-ಮನೆ ಅಂಗಡಿ ಕಳ್ಳತನ ಮಾಡಿಸುವದು, ಬಣಿವೆ ಸುಡಿಸುವದು. ಈ ಕುಹಕಿಗಳ ಕುತಂತ್ರ. ಇವರ ಬೋರ್ಡಿಂಗಿನಲ್ಲಿ ಊಟಮಾಡುವ ಮಕ್ಕಳ ಊಟ ನೋಡಬೇಕು. ಯಾರ ಹೃದಯಕ್ಕೂ ಬರೆಕೊಟ್ಟಂತಾಗಿ ಕಣ್ಣೀರು ಬಾರದೆ ಇರುವ ಬೋರ್ಡಿಂಗಿನಲ್ಲಿ ಒಬ್ಬ ಹುಡುಗನೂ ಇಲ್ಲದೆ ಕಾಗದ-ಪತ್ರಗಳ ಮಂತ್ರದಂಡದಿಂದ ಪ್ರತಿ-ವರುಷವೂ ೧೦-೨೦ ಸಾವಿರ ಸರಕಾರೀ ಸಹಾಯಧನ ಎತ್ತುವರು. ತಮ್ಮ ಬೊಜ್ಜ ಬೆಳೆಸುವರು. ಇನ್ನು ನೆರೆ ಹಾವಳಿ-ಬಿರುಗಾಳಿ-ಭೂಕಂಗಳಿಗೆ ತುತ್ತಾದ ದುರ್ದೈವೀ ಜನರ ಹೆಸರಿನಿಂದ ಎತ್ತಿದ ನಿಧಿಯಂತೂ ಅವರಿಗೆ ಮುಟ್ಟುವ ಮೊದಲೇ ಪೇಟೆಯಲ್ಲಿ ಮಾರಟವಾಗುತ್ತಿರುತ್ತವೆ.

ಇವರಿಂದ ಸಮಾಜಕ್ಕೆ. ದೇಶಕ್ಕೆ ಹೇಳತಕ್ಕಂತಹ ಯಾವಹಿತವೂ ಆಗುವುದಿಲ್ಲ ದುಡಿಯಲಾರದ, ಆಲಸಿಗಳ, ಮೋಸಗಾರರ, ಕೂಳಬಕ್ಕರ ವರ್ಗ ಈ ದಾನಿಗಳಿಂದ ತಯಾರಾಗುತ್ತದೆ. ಅವರನ್ನು ಸಲಹುವದೊಂದೇ ದಾನಿಗಳ ಕೆಲಸವಾಗುತ್ತದೆ. ದುಡಿಯದೆ ದುಃಖ ಪಡೆದ ಉಂಡುಟ್ಟು, ಸುಖದಿಂದಿರುವದನ್ನು ಬಿಟ್ಟು, ಪರಿಪರಿಯ ವ್ಯಸನಗಳ ಅಧೀನರಾಗಿ ಹಾಳಾಗುತ್ತಾರೆ.

ಅನಾಥಾಶ್ರಮಗಳ ಹೆಸರಿನಲ್ಲಿಯು ಕೆಲ ಹುಡುಗರನ್ನು ಪಾವತಿ ಬುಕ್ಕು ಕೊಟ್ಟು ಡೋಲು ಬಾರಿಸುತ್ತ ಓಣಿ-ಓಣಿ, ಊರೂರು ತಿರುಗಿಸಿ ಹಣಎತ್ತಿ ಮೊಜಮಾಡುವ ಮೋಸಗಾರರ ಗುಂಪು ಅದೆಷ್ಟು ಸಲ ಸರಕಾರದ ಕಣ್ಣಿಗೆ ಬಿದ್ದು ಜೈಲು ಸೇರಿಲ್ಲ. ಇಂತಹ ಕುರುಡು ದಾನದಿಂದ ಅದಾವ ಪುಣ್ಯಕಟ್ಟಿಕೊಳ್ಳುವರೋ!

ಕಾರಣ ತಾವು ಮಾಡುವ ದಾನದ ಯೋಗ್ಯ ಪರಿಣಾಮವಾಗುವುದೋ ಇಲ್ಲವೋ ನೋಡಬೇಕು' ವ್ಯಕ್ತಿಯಾಗಿದ್ದರೆ ಅವನು ಸ್ವಾವಲಂಬಿ ಯಾಗುವನೋ ಇಲ್ಲವೋ ನೊಡಬೇಕು. ಸಾಮಾಜಿಕ ಪುಢಾರಿಗಳಾಗಿದ್ದರೆ ಸಮಾಜದ ಕಲ್ಯಾಣ ಕಾರ್ಯಗಳಿಗೆ, ಅತ್ಯಾವಶ್ಯಕತೆಗೆ, ಸಲ್ಲುತ್ತವೆಯೋ ಇಲ್ಲವೋ ಎಂಬುದನ್ನು ಸೂಕ್ಷ್ಮ ದೃಷ್ಟಿಯಿಂದ ನೋಡಬೇಕು. ಮೂಢ ಭಾವನೆಯಿಂದ ದಾನಮಾಡುವುದನ್ನು ನಿಲ್ಲಿಸಬೇಕು ಅಂದರೇನೇ ದಾನಮಾಡುವದು ಸಮಾಜಕ್ಕೆ, ದೇಶಕ್ಕೆ ಹಿತ.

# ಹಳೆಯ ವಿದ್ಯಾರ್ಥಿಗಳ ಸಂಘ

ಶ್ರೀ ಸಿದ್ಧಗಂಗಾ ಕ್ಷೇತ್ರ : : ತುಮಕೂರು ಜಿಲ್ಲೆ

**ಸರ್ವಸದಸ್ಯರ ಮಹಾಧಿವೇಶನದ ಆಹ್ವಾನ ಪತ್ರಿಕೆ.**

**ಪ್ರಿಯ ಮಿತ್ರರೇ,**

ನಮ್ಮ ಸಂಘದ ಮುವತ್ತೆರಡನೆಯ ಸರ್ವಸದಸ್ಯರ ಮಹಾಧಿವೇಶನವನ್ನು ತಾ|| **8-1-1989**ನೇ ಭಾನುವಾರ ಬೆಳಿಗ್ಗೆ 10 ಘಂಟೆಗೆ ಶ್ರೀ ಸಿದ್ಧಗಂಗಾ ಕ್ಷೇತ್ರದ ಆಡಿಟೋರಿಯಮ್‌ನಲ್ಲಿ ಸಮಾವೇಶಗೊಳ್ಳುವಂತೆ ಶ್ರೀ ಶ್ರೀಗಳವರ ಅಪ್ಪಣೆ ಮೇರಿಗೆ ವ್ಯವಸ್ಥೆ ಮಾಡಲಾಗಿದೆ. ಸಂಘವು ಹಮ್ಮಿಕೊಂಡಿರುವ ಅನೇಕ ಗುರುತರ ಚಟುವಟಿಕೆಗಳ ಬಗ್ಗೆ ತಪ್ಪದೆ ಆಗಮಿಸಿ ತಮ್ಮ ಅಮೂಲ್ಯ ಸಲಹೆ ಸಹಕಾರಗಳನ್ನಿತ್ತು ಅಧಿವೇಶನವನ್ನು ಯಶಸ್ವಿಗೊಳಿಸ ಚರ್ಚಿಸ್ಸುವ ಸಲುವಾಗಿ ತಾವೆಲ್ಲರೂ ಗೆಳೆಯರೊಡನೆ ಬೇಕಾಗಿ ಕೋರುತ್ತೇವೆ. ಅನೇಕ ಮಿತ್ರರ ವಿಳಾಸಗಳು ಬದಲಾವಣೆಯಾಗಿರುವ ಕಾರಣ ಪತ್ರಗಳು ತಲುಪದಿರಬಹುದು. ಪತ್ರಗಳು ತಲುಪಿದ ಸದಸ್ಯರು ತಮಗೆ ತಿಳಿದಿರುವ ಹಳೆಯ ವಿದ್ಯಾರ್ಥಿ ಮಿತ್ರರನ್ನು ಸಭೆಗೆ ಕರೆತರಲು ವಿನಂತಿ. ಬದಲಾದ ವಿಳಾಸಗಳನ್ನು ತಿಳಿಸಲು ಮತ್ತು ಸದಸ್ಯರುಗಳ ಹೊಸ ವಿಳಾಸಗಳನ್ನು ಜೊತೆಗೆ ತರಲು ಕೋರಲಾಗಿದೆ.

**ವಿಶೇಷ ಮನವಿ** :- ಹಳೆಯ ವಿದ್ಯಾರ್ಥಿ ಸಂಘಕ್ಕೆ **101/-** ರೂ. ಸಲ್ಲಿಸಿ "ಖಾಯಂ ಸದಸ್ಯತ್ವ" ಮಿತ್ರರು ಈ ಕೂಡಲೇ ತಮ್ಮ ವಂತಿಕೆಯನ್ನು ಪಡೆಯದ ಸಲ್ಲಿಸಿ ಸದಸ್ಯತ್ವವನ್ನು ಪಡೆಯಿರಿ.

## ನಮ್ಮ ಸಂಘದ ಹೆಮ್ಮೆಯ ಪ್ರಕಟಣೆ
## 'ಸಿದ್ಧಗಂಗಾ' ಮಾಸಪತ್ರಿಕೆ

- ಶ್ರೀವಾಣಿ ಮತ್ತು ಧರ್ಮಸಂದೇಶ ಹೊತ್ತ "ಸಿದ್ಧಗಂಗಾ" ಕರ್ನಾಟಕರಾಜ್ಯಾದ್ಯಂತ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಪ್ರಸಾರವಾಗುತ್ತಿದೆ.
- 23 ವರ್ಷಗಳು ನಾಡುನುಡಿಯ ಸೇವೆ ಸಲ್ಲಿಸಿ 24ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ.
- ನೀವು ಮತ್ತು ಬಂಧು-ಮಿತ್ರರು "ಸಿದ್ಧಗಂಗಾ" ಕ್ಕೆ 1989ನೇ ಸಾಲಿಗೆ ಸದಸ್ಯರಾಗಿರಿ.
- **ವಾರ್ಷಿಕ ಚಂದಾ:–20/-ರೂ. ಗಳು**
- **ಅಜೀವ ಸದಸ್ಯತ್ವ ಚಂದಾ:–201/-**
- 'ಸಿದ್ಧಗಂಗಾ' ಇನ್ನೂ ಪರಿಪುಷ್ಟವಾಗ ಬೆಳೆಯಲು ನಿಮ್ಮೆಲ್ಲರ ಪ್ರೋತ್ಸಾಹ **ಕೋರುತ್ತೇವೆ.**

ಸಿದ್ಧಗಂಗಾ ಕ್ಷೇತ್ರ
ತಾ|| 5-12-88

ತಮ್ಮ ವಿಶ್ವಾಸಿ
ಡಾ|| ಎಂ. ಎನ್. ಚನ್ನಬಸ...
ಪ್ರಧಾನ ಕಾರ್ಯದರ್ಶಿ

ಪಿ. ಎನ್. ಚಂದ್ರಶೇಖರಯ್ಯ

# ಪ್ರಕಟಣೆ

## ಹಳೆಯ ವಿದ್ಯಾರ್ಥಿಗಳ ಸಂಘ

ಶ್ರೀ ಸಿದ್ಧಗಂಗಾ ಕ್ಷೇತ್ರ : : ತುಮಕೂರು ಜಿಲ್ಲೆ

### ಸರ್ವಸದಸ್ಯರ ಮಹಾಧಿವೇಶನದ ಆಹ್ವಾನ ಪತ್ರಿಕೆ

ಪ್ರಿಯ ಮಿತ್ರರೇ,

ನಮ್ಮ ಸಂಘದ ಮುವತ್ತೆರಡನೆಯ ಸರ್ವಸದಸ್ಯರ ಮಹಾಧಿವೇಶನವನ್ನು ತಾ|| 8-1-1989
ಭಾನುವಾರ ಬೆಳಿಗ್ಗೆ 10 ಘಂಟೆಗೆ ಶ್ರೀ ಸಿದ್ಧಗಂಗಾ ಕ್ಷೇತ್ರದ ಆಡಿಟೋರಿಯಮ್‌ನಲ್ಲಿ ಸಮಾ
ಗೊಳ್ಳುವಂತೆ ಶ್ರೀ ಶ್ರೀಗಳವರ ಅಪ್ಪಣೆ ಮೇರೆಗೆ ವ್ಯವಸ್ಥೆ ಮಾಡಲಾಗಿದೆ. ಸಂಘವು ಹಮ್ಮಿಕೊ
ರುವ ಅನೇಕ ಗುರುತರ ಚಟುವಟಿಕೆಗಳ ಬಗ್ಗೆ ಚರ್ಚಿಸುವ ಸಲುವಾಗಿ ತಾವೆಲ್ಲರೂ ಗೆಳೆಯರೊ
ತಪ್ಪದೆ ಆಗಮಿಸಿ ತಮ್ಮ ಅಮೂಲ್ಯ ಸಲಹೆ ಸಹಕಾರಗಳನ್ನಿತ್ತು ಅಧಿವೇಶನವನ್ನು ಯಶಸ್ವಿಗೊ
ಬೇಕಾಗಿ ಕೋರುತ್ತೇವೆ. ಅನೇಕ ಮಿತ್ರರ ವಿಳಾಸಗಳು ಬದಲಾವಣೆಯಾಗಿರುವ ಕಾರಣ ಪತ್ರ
ತಲುಪದಿರಬಹುದು. ಪತ್ರಗಳು ತಲುಪಿದ ಸದಸ್ಯರು ತಮಗೆ ತಿಳಿದಿರುವ ಹಳೆಯ ವಿದ್ಯಾ
ಮಿತ್ರರನ್ನು ಸಭೆಗೆ ಕರೆತರಲು ವಿನಂತಿ. ಬದಲಾದ ವಿಳಾಸಗಳನ್ನು ತಿಳಿಸಲು ಮತ್ತು ಸದಸ್ಯರು
ಹೊಸ ವಿಳಾಸಗಳನ್ನು ಜೊತೆಗೆ ತರಲು ಕೋರಲಾಗಿದೆ.

**ವಿಶೇಷ ಮನವಿ** :- ಹಳೆಯ ವಿದ್ಯಾರ್ಥಿ ಸಂಘಕ್ಕೆ **101/-** ರೂ. ಸಲ್ಲಿಸಿ "ಖಾಯಂ ಸದಸ್ಯ
ಪಡೆಯದ ಮಿತ್ರರು ಈ ಕೂಡಲೇ ತಮ್ಮ ವಂತಿಕೆಯನ್ನು ಸಲ್ಲಿಸಿ ಸದಸ್ಯತ್ವವನ್ನು ಪಡೆಯಿರಿ.

[illegible] ನಾವು ಒಂದು ಬಾರಿ ಹೋಗಿದ್ದಾಗ ಕನ್ನಡ ಮಾತನಾಡಿದವರು ಸಿಕ್ಕರೆ ನಮಗೆ ಸ್ವರ್ಗವೇ ಸಿಕ್ಕಿದಂತಾಯಿತು ಆಗ ನಮಗೆ ಆದ ಸಂತೋಷ ಹೇಳತೀರದು, ನಮ್ಮ ಭಾಷೆಯ ಸೌಂದರ್ಯ ನಮ್ಮ ಆನಂದಆದರೆ ಕನ್ನಡ ಒಂದರಿಂದಲೇ ನಮ್ಮ ಅಭಿವೃದ್ಧಿ ಸಾಧ್ಯವಿಲ್ಲ ಜೊತೆಗೆ ಸಂಪರ್ಕ ಭಾಷೆಯೊಂದರ ಅಗತ್ಯವಿದೆ ಎಂಬುದನ್ನು ಮರೆಯುವಂತಿಲ್ಲ" ಎಂದರು.

# ಹಳೆಯ ವಿದ್ಯಾರ್ಥಿಗಳ ಸಂಘ

ಶ್ರೀ ಸಿದ್ಧಗಂಗಾ ಕ್ಷೇತ್ರ : : ತುಮಕೂರು ಜಿಲ್ಲೆ

**ಸರ್ವಸದಸ್ಯರ ಮಹಾಧಿವೇಶನದ ಆಹ್ವಾನ ಪತ್ರಿಕೆ.**


**ಅಜೀವ ಸದಸ್ಯತ್ವ ಚಂದಾ:–201/-**


'ಸಿದ್ಧಗಂಗಾ' ಇನ್ನೂ ಪರಿಪುಷ್ಟವಾಗ ಬೆಳೆಯಲು ನಿಮ್ಮೆಲ್ಲರ ಪ್ರೋತ್ಸಾಹ ಕೋರುತ್ತೇವೆ.

ಸಿದ್ಧಗಂಗಾ ಕ್ಷೇತ್ರ
ತಾ॥ 5-12-88

ತಮ್ಮ ವಿಶ್ವಾಸಿ
ಡಾ॥ ಎಂ. ಎನ್. ಚನ್ನಬಸಪ್ಪ
ಪ್ರಧಾನ ಕಾರ್ಯದರ್ಶಿ

ಪಿ. ಎನ್. ಚಂದ್ರಶೇಖರಯ್ಯ

ದಿನಾಂಕ 25-11-1988ರಂದು ಸಂಜೆ 6 ಘಂಟೆಗೆ ಶ್ರೀ ಸಿದ್ಧಗಂಗಾ ಮಠದಲ್ಲಿ ಸಂಯುಕ್ತ ವಿದ್ಯಾರ್ಥಿ ಸಂಘದ ವತಿಯಿಂದ "ಕನ್ನಡ ರಾಜ್ಯೋತ್ಸವ ಸಮಾರಂಭವನ್ನು ಆಚರಿಸಲಾಯಿತು.

ಸಿದ್ಧಗಂಗಾ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಸಭೆಯ ದಿವ್ಯ ನೇತೃತ್ವ ವಹಿಸಿ ಆಶೀರ್ವಚನ ನೀಡಿದರು: ಅವರು ಮಾತನಾಡುತ್ತ "ಕನ್ನಡ ನಾಡಿನಲ್ಲಿ ಕನ್ನಡವೇ ಪ್ರಥಮ ಭಾಷೆಯಾಗಬೇಕು. ಕನ್ನಡಿಗರಿಗೆ ಕನ್ನಡ ನುಡಿಯ ಮೇಲೆ ಅಪಾರ ಅಭಿಮಾನವಿರಬೇಕು. ಈ ಬಗ್ಗೆ ಎರಡು ಮಾತೇ ಇಲ್ಲ. ಜೊತೆಗೆ ನಮ್ಮ ಭಾರತೀಯ ಸಂಸ್ಕೃತಿ ಮತ್ತು ಜ್ಞಾನ ಕೇಂದ್ರವಾದ ಸಂಸ್ಕೃತವನ್ನು ಅಲಕ್ಷಿಸಬಾರದು ಸಂಸ್ಕೃತದಿಂದ ಕನ್ನಡದ ಬೆಳವಣಿಗೆಗೆ ಅಪಾರ ಸಹಾಯ ಸೌಲಭ್ಯ ದೊರೆತಿದೆ. ಮತ್ತು ಇಂದು ಕನ್ನಡ ರಾಜ್ಯೋತ್ಸವವನ್ನು ಆಚರಿಸುತ್ತೇವೆ. ಕೇವಲ ಸಮಾರಂಭ ಆಚರಣೆಯಲ್ಲಿಯೆ ನಮ್ಮ ಅಧ್ಯಯನ ಮಾಡಿ ಕನ್ನಡ ಭಾಷೆಯ ಮತ್ತು ಜೀವನ ಮೌಲ್ಯಗಳನ್ನು ಇತರರೂ ಕಲಿಯುವಂತೆ ಅವಕಾಶ ಮಾಡಿಕೊಡಬೇಕು. ಎಂದರು.

ಸಭೆಯ ಅಧ್ಯಕ್ಷತೆ ವಹಿಸಿದ್ದ ವಿಧಾನ ಸಭೆಯ ವಿರೋಧ ಪಕ್ಷದ ನಾಯಕಿಯರಾದ ಶ್ರೀಮತಿ ಕೆ ಎಸ್. ನಾಗರತ್ನಮ್ಮನವರು ಮಾತನಾಡುತ್ತ "ನಾವು ಕನ್ನಡಿಗರು ಕನ್ನಡ ನಾಡನ್ನು ಮತ್ತು ಭಾಷೆಯನ್ನು ನಾವು ಉಳಿಸಿ ಬೆಳೆಸಬೇಕಾದ್ದು ನಮ್ಮ ಮುಖ್ಯ ಕರ್ತವ್ಯ ಆ ವಿಚಾರದಲ್ಲಿ ಬೇರೊಂದು ಮಾತಿಲ್ಲ, ಆದರೆ ಕನ್ನಡ ಒಂದರಿಂದಲೇ ನಮ್ಮ ಅಭಿವೃದ್ಧಿ ಸಾಧ್ಯವಿಲ್ಲ. ಕನ್ನಡದ ಬಗ್ಗೆ ನಮ್ಮ ನಿಮ್ಮೆಲ್ಲರ ಪೂರ್ಣ ಅಭಿಮಾನವಿರಬೇಕು. ನಾವು ಒಂದು ಬಾರಿ ಹೋಗಿದ್ದಾಗ ಕನ್ನಡ ಮಾತನಾಡಿದವರು ಸಿಕ್ಕರೆ ನಮಗೆ ಸ್ವರ್ಗವೇ ಸಿಕ್ಕಿದಂತಾಯಿತು ಆಗ ನಮಗೆ ಆದ ಸಂತೋಷ ಹೇಳತೀರದು, ನಮ್ಮ ಭಾಷೆಯ ಸೌಂದರ್ಯ ನಮ್ಮ ಆನಂದಲಿದರೆ ಕನ್ನಡ ಒಂದರಿಂದಲೇ ನಮ್ಮ ಅಭಿವೃದ್ಧಿ ಸಾಧ್ಯವಿಲ್ಲ ಜೊತೆಗೆ ಸಂಪರ್ಕ ಭಾಷೆಯೊಂದರ ಅಗತ್ಯವಿದೆ ಎಂಬುದನ್ನು ಮರೆಯುವಂತಿಲ್ಲ" ಎಂದರು.

ಅವರು ಮಾತನಾಡುತ್ತಾ ಶ್ರೀ ಸಿದ್ಧಗಂಗಾ ಮಠದ ತಪೋಭೂಮಿಯ ಮಹತ್ವವನ್ನು ಮನಸಾರೆ ಕೊಂಡಾಡಿ ನಾನು ಇಂದು ಈ ಸ್ಥಾನವನ್ನು ಪಡೆಯಬೇಕಾದರೆ ಶ್ರೀ ಸಿದ್ಧಗಂಗಾ ಮಠದ ಶ್ರೀ ಶ್ರೀಗಳವರೇ ಕಾರಣ ಶ್ರೀ ಮಠದ ಪ್ರಸಾದ ನಮಗೆ ಸ್ಫೂರ್ತಿ ಕೊಟ್ಟಿದೆ" ಎಂದರು.

ರಾಜ್ಯೋತ್ಸವದ ಬಗ್ಗೆ ಮುಖ್ಯಅತಿಥಿಗಳಾಗಿ ಆಗಮಿಸಿ ಉಪನ್ಯಾಸ ಮಾಡಿದ ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿಯ ಅಧ್ಯಕ್ಷರು ನಿರ್ದೇಶಕರೂ ಆದ ಶ್ರೀ ಕೆ. ಶಾಂತಯ್ಯನವರು ಮಾತನಾಡುತ್ತಾ ಕನ್ನಡ ನಾಡು ವಿಶಾಲ ಕರ್ನಾಟಕವಾದ ಹಿನ್ನೆಲೆಯನ್ನು ಮನವರಿಕೆ ಮಾಡುತ್ತಾ ಏಕೀಕರ್ನಾಟಕದ ಬಗ್ಗೆ ದುಡಿದ ಅನೇಕ ಮಹನೀಯರನ್ನು ಕೊಂಡಾಡಿದರು. "ಚೆಲುವ ಕನ್ನಡ ನಾಡಾಗಬೇಕೆಂದು ಕನಸು ಕಂಡರು. ಇಂದು ಚೆಲುವ ಕನ್ನಡ ನಾಡು ಆಗಿದೆಯೇ, ಸಮಾರಂಭ ಉತ್ಸವ ಮಾಡಿ ಬರೀ ಸಂತೋಷ ಪಡುವುದರಲ್ಲಿಯೇ ಕಾಲಹರಣ ಮಾಡುತ್ತೇವೆ. ಕನ್ನಡಿಗನಿಗೆ ಕನ್ನಡವೇ ಮಾತೃಭಾಷೆ ಅವನು ಕಲಿಯುವ ಭಾಷೆ ಅವನು ವ್ಯವಹರಿಸುವ ಭಾಷೆ ಕನ್ನಡವೇ ಆಗಬೇಕು. ಶಕ್ತವಿದ್ದ ಮಗು ಎಷ್ಟು ಭಾಷೆಯನ್ನು ಬೇಕಾದರೂ ಕಲಿಯಲಿ ಬೇಡವೆನ್ನುವುದಿಲ್ಲ. ಕನ್ನಡವೇ ನಮ್ಮ ಆಡಳಿತ ಭಾಷೆಯಾಗಬೇಕು. ಈ ಬಗ್ಗೆ ನಾವುಗಳು ಚಿಂತಿಸಿ ಕಾರ್ಯ ನಿರತರಾಗಬೇಕು. ಸರ್ಕಾರ ಮನಸ್ಸು ಮಾಡಬೇಕು. ವಿರೋಧ ಪಕ್ಷದ ನಾಯಕರುಗಳು ಈ ಬಗ್ಗೆ ತಮ್ಮ ಅಭಿಪ್ರಾಯವನ್ನು ಸದನದಲ್ಲಿ ಕೊಡಬೇಕು ಎಂದರು.

ಪ್ರಾರಂಭದಲ್ಲಿ ಶ್ರೀ ಮಠದ 4000 ಸಾವಿರ ಮಕ್ಕಳಿಂದ ಸಾಮೂಹಿಕ ಪ್ರಾರ್ಥನೆಯಾಯಿತು, ಶ್ರೀ ರೇವಣಸಿದ್ಧಯ್ಯನವರು ಸ್ವಾಗತ ಕೋರಿದರು. ಶ್ರೀ ಹೆಚ್. ಬಿ. ಗಂಗಾಧರಯ್ಯನವರು ವಂದಿಸಿದರು. ಶ್ರೀ ಪಿ. ಎನ್. ಚಂದ್ರಶೇಖರಯ್ಯನವರು ನಿರ್ವಹಣೆ ಮಾಡಿದರು.

**ಶ್ರೀ ಸಿದ್ಧಗಂಗಾ ಮಠಕ್ಕೆ ಮಾನ್ಯ ಮುಖ್ಯ ಮಂತ್ರಿಗಳು ಮತ್ತು ವಿದ್ಯಾಮಂತ್ರಿಗಳ ಬೇಟಿ.**

ದಿನಾಂಕ 30-11-1988 ರಂದು ಮಾನ್ಯ ಮುಖ್ಯಮಂತ್ರಿಗಳಾದ **ಶ್ರೀ ಎಸ್. ಆರ್. ಬೊಮ್ಮಾಯಿಯವರು** ಮತ್ತು ಶಿಕ್ಷಣ ಮಂತ್ರಿಗಳಾದ **ಶ್ರೀ ಎಂ. ಚಂದ್ರಶೇಖರ್‌ರವರು** ಶ್ರೀ ಸಿದ್ಧಗಂಗಾಮಠಕ್ಕೆ ಭೇಟಿಯಿತ್ತು ಪ್ರಾರ್ಥನಾ ಸಭೆಯಲ್ಲಿ ಭಾಗವಹಿಸಿ ಸಮಾವೇಶಗೊಂಡಿದ್ದ ಸಹಸ್ರಾರು ಭಕ್ತಾಧಿಗಳ ಅಭಿಮಾನಿಗಳ, ಹಳೆಯ ವಿದ್ಯಾರ್ಥಿಗಳು ಮಠದ ವಿದ್ಯಾರ್ಥಿಗಳು ತುಂಬಿದ ಸಭೆಯಲ್ಲಿ ಮಾತನಾಡುತ್ತ "ನಾನು ತಪೋವನಕ್ಕೆ ಬಂದಂತಾಗಿದೆ. ಹೃದಯ ತುಂಬಿ

ಬಂದಿದೆ. ಪರಮ ಪೂಜ್ಯ ಶ್ರೀ ಶ್ರೀಗಳವರು ಐವತ್ತು ವರ್ಷಗಳಿಂದ ಮಾಡಿಕೊಂಡು ಬಂದಿರುವ ಮಹತ್ತರನಾದ ಸೇವೆಯಿಂದ ನಾಡು ಪುನೀತವಾಗಿದೆ. ಹಲವಾರು ಸಂದರ್ಭಗಳಲ್ಲಿ ಪೂಜ್ಯ ಶ್ರೀಗಳಿಂದ ಮಾರ್ಗದರ್ಶನ ಪಡೆದಿದ್ದೇನೆ." ಎಂಬುದಾಗಿ ಸಂತೋಷ ವ್ಯಕ್ತಪಡಿಸಿದರು.

ಹೃನ್ಮಗಳನ್ನು ತುಂಬುವಂತಿದ್ದ ಸಭೆಯನ್ನು ನೋಡಿ ಭಕ್ತಿಯಿಂದ ' ನನಗೆ ನಿಮ್ಮೆನ್ನೆಲ್ಲ ಬಿಟ್ಟುಹೋಗಲು ಮನಸ್ಸು ಬರುತ್ತಿಲ್ಲ " ಆದರೆ ಕಾಲದ ಅಭಾವದಿಂದ ಅನಿವಾರ್ಯವಾಗಿ ತೆರಳಬೇಕಾಗಿದೆ ಎಂದು ನುಡಿದರು.

ಮುಖ್ಯ ಮಂತ್ರಿಗಳಿಗೆ ಶಿಕ್ಷಣ ಸಚಿವರಿಗೆ ಸಸಿವಾಸ ವಿದ್ಯಾಸಂಸ್ಥೆಯವರು ಮಾಲಾರ್ಪಣೆ ಮಾಡಿದರು.

**ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ವತಿಯಿಂದ ತುಮಕೂರು ನಗರದಲ್ಲಿ ನೂತನವಾಗಿ ಕಟ್ಟಿಸಿರುವ ವಿದ್ಯಾಸಂಸ್ಥೆಗಳ ಸಂಕೀರ್ಣದ ಉದ್ಘಾಟನಾ ಸಮಾರಂಭ :-**

ಶ್ರೀ ಸಿದ್ಧಗಂಗಾ ಪೂಜ್ಯ ಶ್ರೀ ಶ್ರೀಗಳು ಮತ್ತು ಶ್ರೀ ಮಠ ರಾಜ್ಯಕ್ಕೆ ಮಾತ್ರವಲ್ಲ ಇಡೀ ರಾಷ್ಟ್ರಕ್ಕೆ ಹೆಸರಾಗಿದ್ದಾರೆ. ಅರ್ಧ ಶತಮಾನಕ್ಕೂ ಮೊದಲು ಸರ್ಕಾರ ಮತ್ತು ಸಮಾಜ ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸುವುದಕ್ಕೂ ಮುಂಚೆ ಕರ್ನಾಟಕದ ಮಠಗಳು ಶಿಕ್ಷಣ ಕ್ಷೇತ್ರಕ್ಕೆ ರಾಷ್ಟ್ರಕೇ ಮಾದರಿಯಾಗುವಂಥ ಸೇವೆ ಸಲ್ಲಿಸಿರುವುದನ್ನು ಸ್ಮರಿಸುತ್ತ ಮಾನ್ಯ ಮುಖ್ಯ ಮಂತ್ರಿಗಳಾದ **ಶ್ರೀ ಎಸ್. ಆರ್. ಬೊಮ್ಮಾಯಿಯವರು** ದಿನಾಂಕ 30.11.88 ರಂದು ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯವರು ನಿರ್ಮಾಣ ಮಾಡಿದ ವಿವಿಧ ಶಿಕ್ಷಣ ಸಂಸ್ಥೆಗಳ ಕಟ್ಟಡಗಳನ್ನು ಉದ್ಘಾಟಿಸುತ್ತ ಶ್ಲಾಘಿಸಿದರು. ಶಿಕ್ಷಣದಿಂದಲೇ ಶಕ್ತಿ, ಶಿಕ್ಷಣದಿಂದಲೇ ಮುಕ್ತಿ, ಅಂತಹ ಶಿಕ್ಷಣ ಸೇವೆ ಶ್ರೀ ಸಿದ್ಧಗಂಗಾ ಮಠದಿಂದ ಸರ್ವಜನಾಂಗದವರಿಗೂ ಲಭ್ಯವಾಗುತ್ತ ಬಂದಿರುವುದನ್ನು ಸರ್ಕಾರ ಗಮನಿಸಿದೆ.

ಶಿಕ್ಷಣ ನೈತಿಕತೆಯನ್ನು ತಂದುಕೊಡುತ್ತದೆ ಅದರಲ್ಲೂ ಧಾರ್ಮಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ಇಡೀ ಜಗತ್ತಿಗೆ ಭಾರತ ಕೊಟ್ಟಿರುವ ಅಮೂಲ್ಯ ಕೊಡುಗೆ ಎಂದು ನುಡಿದರು.

ಮಠಮಾನ್ಯಗಳ ಮೂಲಕ ನಡೆದಿರುವ ಶಿಕ್ಷಣ ಸೇವೆಯನ್ನು ನಾಡು ಸಮಾಜ ಪಡೆದುಕೊಂಡಿದೆ. ಮಗು ಸಮಾಜ, ಸರ್ಕಾರ, ಎಲ್ಲಕ್ಕೂ ಸೇರಿದ್ದು

ಆದರ ಶಿಕ್ಷಣ ಎಲ್ಲರಿಗೂ ಸೇರಿದ್ದು ಗ್ರಾಮೀಣ ಪ್ರದೇಶದ ಮಕ್ಕಳ ಶೈಕ್ಷಣಿಕ ಅಭಿವೃದ್ಧಿಗೆ ಶ್ರೀಮಠ ಅಮೂಲ್ಯ ಸೇವೆಯನ್ನು ಮಾಡಿದೆ ಎಂದು ಶಿಕ್ಷಣ ಸಚಿವರಾದ **ಶ್ರೀ ಎಂ. ಚಂದ್ರಶೇಖರ್** ಅವರು ಮಾತನಾಡಿದರು.

ಮನುಷ್ಯ ಮನುಷ್ಯನಾಗಿ ಬಾಳುವ ಕಲೆಯನ್ನು ಕಲಿಸುವುದೇ ಶಿಕ್ಷಣ. ಅದಕ್ಕಾಗಿ ಪ್ರಾಚೀನ ಕಾಲದಿಂದಲೂ ಮಠಗಳು ಶ್ರಮಿಸುತ್ತ ಬಂದಿದೆ. ಮಠವೆಂದರೆ ವಿದ್ಯಾರ್ಥಿಗಳು ವಾಸಮಾಡುವ ಅಭ್ಯಾಸ ಮಾಡುವ ಸ್ಥಳವೆಂದೇ ಅರ್ಥ. ಇಂದು ನೈತಿಕತೆಯ ದಿವಾಳಿ ಎಲ್ಲಾ ಕ್ಷೇತ್ರಗಳಲ್ಲೂ ಕಾಣುತ್ತಿದೆ. ನೈತಿಕ ಬಂಡವಾಳ ಭರತಖಂಡದ ದಿವ್ಯ ಸಂಪತ್ತು ಎಂಬುದಾಗಿ ಪೂಜ್ಯ ಶ್ರೀ ಶ್ರೀಗಳು ನುಡಿದರು. ಶ್ರೀ ಮಠದ ಸಲ್ಲಿಸುತ್ತ ಬಂದಿರುವ ಸೇವೆಯನ್ನು ಸರ್ಕಾರ ಮತ್ತು ಸಮಾಜ ಪರಿಗಣಿಸಿದ್ದು ಸಂತೋಷ. ಅವುಗಳ ಸಹಾಯವು ಶ್ರೀ ಮಠಕ್ಕೆ ಲಭ್ಯವಾಗಿದೆ ಎಂಬುದಾಗಿ ಶ್ರೀ ಶ್ರೀಗಳು ಆಶೀರ್ವಚನ ಮಾಡಿದರು.

ಸಭೆಯಲ್ಲಿ ಶಾಸಕರು, ವಿವಿಧ ಅಧಿಕಾರವರ್ಗದವರು, ಶ್ರೀ ಸಿದ್ಧಗಂಗಾ ವಿಧ್ಯಾಸಂಸ್ಥೆಯ ಸದಸ್ಯರು, ಅಭಿಮಾನಿಗಳು ಕಿಕ್ಕಿರಿದು ಸಮಾವೇಶಗೊಂಡಿದ್ದರು.

ಸಭೆಯ ಪ್ರಾರಂಭದಲ್ಲಿ ಶ್ರೀ ಕೆ. ಎಂ. ರೇವಣಸಿದ್ಧಯ್ಯನವರು ಸ್ವಾಗತಿಸಿದರು, ಶ್ರೀ ಟಿ. ಕೆ. ನಂಜುಂಡಪ್ಪನವರು ವರದಿ ಓದಿದರು. ಶ್ರೀ ಸಾಗರನಹನಳ್ಳಿ ರೇವಣ್ಣನವರು ವಂದಿಸಿದರು.

---

# ಕೃತಜ್ಞತೆಗಳು

**ಸಿದ್ಧಗಂಗಾ** ಮಾಸಿಕ 24 ನೇ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಿದೆ. ಪತ್ರಿಕೆ ಬೋಧಪ್ರದವಾಗಿ ಆಕರ್ಷಕವಾಗಿ ಪ್ರಕಟಣೆಗೊಳ್ಳಲು ಕಾರಣರಾದ ನಾಡಿನ ಪ್ರಸಿದ್ಧ ಲೇಖಕರುಗಳು, ಪತ್ರಿಕೆಗೆ ಅಲ್ಪ-ಸ್ವಲ್ಪ ಮಟ್ಟಿಗೆ ಆರ್ಥಿಕವಾಗಿ ಚೇತನಗೊಳ್ಳಲು ಶಕ್ತಿ ನೀಡಿರುವ ಅಭಿಮಾನಿ ಜಾಹೀರಾತುದಾರರುಗಳು, ಎಲ್ಲಕ್ಕೂ ಮಿಗಿಲಾಗಿ ಪತ್ರಿಕೆಯ ರಕ್ಷಣೆಗೆ ಕಾರಣರಾಗಿರುವ ಆಜೀವ ಸದಸ್ಯರುಗಳು ಮತ್ತು ಅಭಿಮಾನಿ ಓದುಗ ಬಳಗ ಇವರುಗಳಿಗೆ ಸಿದ್ಧಗಂಗಾ ಸಂಪಾದಕ ಮಂಡಳಿ ತನ್ನ ಕೃತಜ್ಞತೆಗಳನ್ನು ಸಮರ್ಪಿಸಿದೆ.

ಶ್ರೀ ಮಠದ ಆಶ್ರಯದಲ್ಲಿ ಬೆಳೆದ ಎಲ್ಲಾ ಹಳೆಯ ವಿದ್ಯಾರ್ಥಿಗಳು ಭಕ್ತಾಭಿಮಾನಿಗಳೂ 'ಸಿದ್ಧಗಂಗಾ' ದ ಸದಸ್ಯರಾಗಲು ಮನವಿ ಮಾಡುತ್ತೇವೆ. "ಸಿದ್ಧಗಂಗಾ" ನಾಡಿನಾದ್ಯಂತ ಹೆಚ್ಚು ಪ್ರಸಾರಗೊಳ್ಳಲು ತಮ್ಮೆಲ್ಲರ ಸಹಕಾರವನ್ನು ಕೋರುತ್ತೇವೆ.

— **ಪ್ರಕಾಶಕರು.**

# ಗ್ರಾಮಾಂತರ ಬಸವ ಜಯಂತಿ-204

ಚ್. ವಿ. ವೀರಭದ್ರಯ್ಯ, ಉಪನ್ಯಾಸಕರು ಕನ್ನಡ ವಿಭಾಗ, ಸಿದ್ಧಗಂಗಾ ಕಾಲೇಜು ತುಮಕೂರು

**ಆತ್ಮೀಯ ಶರಣ ಬಂಧು,**

ಸಾವನದುರ್ಗ ಚಾರಿತ್ರಿಕ ಪ್ರಸಿದ್ಧಿ ಪಡೆದ ಸ್ಥಳ. ಗಂಡು ಮೆಟ್ಟಿನ ಗಿರಿ, ತುದಿಯಲ್ಲಿ ದೇವಮಂದಿರ. ಬಂಡೆ ಹೋಳಾಗಿ ನಿಂತ ಪ್ರಕೃತಿಯ ಅದ್ಭುತ ದೃಶ್ಯ. ಗಿರಿಯ ತಪ್ಪಲಲ್ಲಿ ವೀರಭದ್ರನ ಗುಡಿ, ಹಳೆಯ ಕಾಲದ ಮಂದಿರ ಶಿಲ್ಪ ಸುಂದರ. ವರ್ಷಕ್ಕೊಮ್ಮೆ ಜಾತ್ರೆ ಅಪಾರ ಜನ ಸಂದಣಿ. ಮಾಗಡಿ ಸುತ್ತ-ಮುತ್ತಿನ ಗ್ರಾಮೀಣ ಬಂಧುಗಳಿಗೊಂದು ವಿಶೇಷ ಅವಕಾಶ. ಪರಸ್ಪರ ಯೋಗಕ್ಷೇಮ ವಿನಿಮಯ. ಅಪ್ಪಟ ಮಣ್ಣಿನ ಮಕ್ಕಳ ಅಕೃತಕ ನಡೆನುಡಿಗಳ ಸುಂದರ ದೃಶ್ಯ.

ದಿನಾಂಕ 2-2.1988ರಂದು ಬಸವ ತತ್ವಗಳ ಪರಿಚಯ ಅಲ್ಲಿ. ಅಸಾಧ್ಯ ಜನ ಸಾಗರ, ಮರಳು ಹಾಕಿದರೆ ಮರಳು ನೆಲಕ್ಕೆ ಬೀಳದಷ್ಟು ಭಕ್ತಾದಿಗಳು, ಪರಮಪೂಜ್ಯರ ದರ್ಶನಾಶೀವಾದಕ್ಕಾಗಿ ನೂಕು ನುಗ್ಗಲು. ಸಿದ್ಧಗಂಗಾ ಶ್ರೀ ಶ್ರೀಗಳು ತಮ್ಮ ತಾಲ್ಲೂಕಿನವರೆಂಬ ಅಭಿಮಾನ ಅದಕ್ಕೆ ಕಾರಣ. ಮೇಲಾಗಿ ಇಂಥ ಮಹಾತ್ಮರ ದರ್ಶನವಾಗುವುದೇ ನಮ್ಮ ಜೀವನದ ಪುಣ್ಯ" ಎಂಬ ಬಾಚೇನಹಟ್ಟಿಯ ಹಿರಿಯರೊಬ್ಬರ ಭಕ್ತಿನುಡಿ ಜಿಲ್ಲಾ ಪರಿಷತ್ತಿನ ಸದಸ್ಯರಾದ ಶ್ರೀ ದೊಡ್ಡ ರೇವಣ್ಣನವರ ನೇತೃತ್ವದಲ್ಲಿ ವ್ಯವಸ್ಥೆಗೊಂಡಿದ್ದ ಸಮಾರಂಭ ಸಕಾಲಕ್ಕೆ ಪೂಜ್ಯ ಶ್ರೀ ಶ್ರೀ ಗಳವರ ಆಗಮನ. ಅದೂ ಕನಕಪುರದ ಸಮಾರಂಭ ಪೂರೈಸಿಕೊಂಡು ಬಂದದ್ದು. ಬಸವ ತತ್ವಗಳ ಪ್ರಸಾರದಲ್ಲಿ ಶ್ರೀ ಶ್ರೀ ಗಳಿಗಿರುವ ಅಪಾರ ಆಸಕ್ತಿ, ಸಮಾರಂಭದಲ್ಲಿ ವಿದ್ವಾಂಸರಿಂದ ವಿಚಾರಪೂರ್ಣ ಉಪನ್ಯಾಸಗಳು ಬಸವಣ್ಣನವರು ಜಗತ್ತಿಗೆ ಸಲ್ಲಿಸಿದ ಅನುಪಮ ಸೇವೆಯ ವಿವಿಧ ಮುಖಗಳ ಸಂಕ್ಷಿಪ್ತ ಪರಿಚಯ "ಉತ್ತು ಬಿತ್ತುವ ಮಂತ್ರ" ಬಸವಣ್ಣ ಬೋಧಿಸಿದ್ದು "ಬಿತ್ತಿ ಬೆಳೆಯುವಂಥದ್ದು" ಆ ಮಂತ್ರ ಅದೂ ಜನಸಾಮಾನ್ಯರೆಲ್ಲ ಅರ್ಥ ಮಾಡಿಕೊಳ್ಳುವಂಥ ಕನ್ನಡ ಭಾಷೆಯಲ್ಲಿ ಬೋಧಿಸಿದ್ದು, ನಿರಕ್ಷರರೂ ಅರಿತು ಆಚರಿಸುವಂಥದ್ದು ಎಂಬುದನ್ನು ಬೇರೆ ಬೇರೆ ವಿದ್ವಾಂಸರು ಒತ್ತು ಕೊಟ್ಟು ಹೇಳಿದ್ದು ಪರಿಣಾಮಕಾರಿಯಾಗಿತ್ತು.

ಶರಣರು ಕಟ್ಟಿ ಹೋದ ನಾಡು ಕರ್ನಾಟಕ. ಅವರು ಕೊಟ್ಟು ಹೋ
ಸಂದೇಶ ಜಗತ್ತಿಗೆ ಬೇಕಾದದ್ದು ಬಸವಣ್ಣನವರಂಥ ಧರ್ಮದೀಪಕರು ಮತ್ತೊಬ್ಬ
ಜಗತ್ತಿನ ಚರಿತ್ರೆಯಲ್ಲಿಯೇ ದೊರೆಯುವುದು ಅಪರೂಪ. ಜನಸಾಮಾನ್ಯರಿಗಾಗುತ್ತಿ
ಹಲವಾರು ರೂಪದ ಶೋಷಣೆಗಳನ್ನು ನೇರವಾಗಿ ವಿರೋಧಿಸಿದ ಅಸಾಮಾನ್ಯ ಹೋರ
ಟಗಾರರು ಭಗವಾನ್ ಬಸವಣ್ಣನವರು. ಬಸವಣ್ಣನವರನ್ನು ಅರ್ಥ ಮಾಡಿಕೊಳ್ಳ
ಅವರು ತೋರಿಸಿದ ದಾರಿಯಲ್ಲಿ ನಡೆಯದೆ ನಾವಿಂದು ಕುಬ್ಜರಾಗಿದ್ದೇವೆ. ನಮಗಿರು
ಶ್ರೀಮಂತ ಆಧ್ಯಾತ್ಮಿಕ, ಸಾಂಸ್ಕೃತಿಕ ಹಿನ್ನೆಲೆಯನ್ನು ನಾವು ಮರೆತು ಬಾಳುತ್ತಿದ್ದೇ
ಸ್ವಾಭಿಮಾನ ಕಳೆದುಕೊಂಡು ಅಹಂಕಾರಕ್ಕೆ ಬಲಿಯಾಗಿದ್ದೇವೆ. ಅಭಿಮಾನ ಮತ್ತ
ನಿರಹಂಕಾರಗಳ ಜೀವಗಂಗೆಯಾಗಿ ಹರಿದ ಬಸವಣ್ಣನವರು ಕಾಯಕ ದಾಸೋಹಗ
ಹೇರಳ ಬೆಳೆ ಬೆಳೆದರು. ಅದನ್ನು ಅರ್ಥ ಮಾಡಿಕೊಳ್ಳದ ನಾವಿಂದು ದಾರಿದ್ರ್ಯವ
ನುಭವಿಸುತ್ತಿದ್ದೇವೆ ಅವರ ದಾರಿಯೊಂದೇ ನಮ್ಮ ಬದುಕಿಗೆ ಪರಿಹಾರವೆಂ
ಆಶೀರ್ವಚನ ಮಾಡಿದರು ಅಧ್ಯಕ್ಷ ಪೀಠದಿಂದ ಪರಮ ಪೂಜ್ಯ ಶ್ರೀ ಶ್ರೀಗಳು.

ರಾತ್ರಿ 'ಜಗಜ್ಯೋತಿ ಬಸವೇಶ್ವರ' ನಾಟಕ ಪ್ರದರ್ಶನವಾಯಿತು. ಸುಮಾ
ಇಪ್ಪತ್ತು ಸಾವಿರ ಭಕ್ತಾದಿಗಳು ನಾಟಕ ನೋಡಿ ಸಂತೋಷಿಸಿದರು
ಕೊರೆವ ಚಳಿಯನ್ನೂ ಲೆಕ್ಕಿಸದೆ ಹಣ್ಣು ಹಣ್ಣು ಮುದುಕಿಯೊಬ್ಬಳು ಕಣ್ಣೀರು ತುಂ
ಬಸವಣ್ಣನವರು ಐಕ್ಯವಾಗುತ್ತಿದ್ದ ದೃಶ್ಯವನ್ನು ನೋಡುತ್ತ "ನಮ್ಮಪ್ಪ ಕೊನೆಗ
ಹೋಗಿಬಿಟ್ಟೆಯಾ" ಎನ್ನುತ್ತಿದ್ದುದನ್ನು ವರದಿಗಾರ ಕಂಡು ಧನ್ಯ ಪೂಜ್ಯ ಶ್ರೀ ಶ್ರೀಗ
ಮಹಾಮಣಿಹ ಎಂದುಕೊಳ್ಳುವಂತಾಯಿತು. ಮತ್ತೆ ಬರೆಯುತ್ತೇನೆ.

---

## ● ಸಹೃದಯ ಓದುಗರಲ್ಲಿ ವಿನಮ್ರ ಕೋರಿಕೆ ●

ತಾವು **ಸಿದ್ಧಗಂಗಾ** ಪತ್ರಿಕೆಗೆ ಸದಸ್ಯರಾಗಿ ಸಹಕಾರ ನೀಡಿರುತ್ತೀರಿ. ಇದಕ್ಕಾ
ಕೃತಜ್ಞತೆಗಳು. ಡಿಸೆಂಬರ್ ತಿಂಗಳಿಗೆ ತಮ್ಮ ಸದಸ್ಯತ್ವ ಮುಗಿಯುತ್ತದೆ. ತಾವು ಎಂ
ನಂತೆ 1989 ನೇ ಸಾಲಿಗೂ ತಮ್ಮ ಚಂದಾ ಹಣ 20=00 ರೂಗಳನ್ನು ಕಳುಹಿ
ಸದಸ್ಯತ್ವವನ್ನು ಮುಂದುವರಿಸಲು ಪ್ರಾರ್ಥನೆ.

**ಪ್ರಕಾಶಕರು.**

ಸ್ಥಾಪನೆ : 1915 ತಂತ್ರಿ : "ಹ್ಯಾಪಿಮೂನ್"

# ಶಾಸ್ತ್ರೋಕ್ತವಾಗಿ ತಯಾರಿಸಿದ ಸುಗಂಧ ಸಾಮಗ್ರಿಗಳು

ಪ್ರಖ್ಯಾತವಾದ

- ಪರಿಮಳದಶಾಂಗ
- ದೂಪದ ಕೊಡ
- ವಿಭೂತಿ
- ಹವನ ಸಾಮಗ್ರಿಗಳ

ತಯಾರಕರು




ಶಿವಪೂಜಾ
ಸಾಮಗ್ರಿಗಳು ದೊರೆಯುತ್ತದೆ.

ಫೋನ್ — ಅಂಗಡಿ — 28009 ಮನೆ — 224623.

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ